ಪ್ರತಿಭಾವಂತ ಸಂಸದೀಯ ಪಟುಗಳು ಪುಸ್ತಕ ಮಾಲಿಕೆ

# ಎಂ.ವಿ. ಕೃಷ್ಣಪ್ಪ

ಜೆ.ಜಿ. ನಾಗರಾಜ ಬೇತಮಂಗಲ

ಕರ್ನಾಟಕ ವಿಧಾನ ಮಂಡಲ ಗ್ರಂಥಾಲಯ ಸಮಿತಿ
ವಿಧಾನಸೌಧ, ಬೆಂಗಳೂರು 560 001

**M.V. KRISHNAPPA:** Eminent Parliamentarian Series, written by **J.G. NAGARAJA,** Lecturer in Kannada **Govt. P.U. College, Kolar** Published by Karnataka Legislative Assemby Secretariat, VidhanaSoudha, Bangalore-01.

Pages - 143 + xi

Rupees - 15/-



First Edition: 2005

Number of Copies: 2,000

Printed and Deisgned by:
Government Printing Press,
Bangalore-01

ಎಂ.ವಿ. ಕೃಷ್ಣಪ್ಪ : ಪ್ರತಿಭಾವಂತ ಸಂಸದೀಯ ಪಟುಗಳ ಪುಸ್ತಕ ಮಾಲಿಕೆ ಲೇಖಕರು: ಜೆ.ಜಿ. ನಾಗರಾಜ ಬೇತಮಂಗಲ, ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಕೋಲಾರ. ಪ್ರಕಟಣೆ: ಕರ್ನಾಟಕ ವಿಧಾನಸಭೆ ಸಚಿವಾಲಯ, ವಿಧಾನಸೌಧ, ಬೆಂಗಳೂರು-1

ಪುಟ ಸಂಖ್ಯೆ: 143 + xi

ಬೆಲೆ ರೂ: 15/-



ಮೊದಲನೆ ಮುದ್ರಣ: 2005
ಪ್ರತಿಗಳ ಸಂಖ್ಯೆ : 2,000
ಮುದ್ರಣ ಹಾಗೂ ಮುಖಪುಟ ವಿನ್ಯಾಸ
ಸರ್ಕಾರಿ ಮುದ್ರಣಾಲಯ, ಬೆಂಗಳೂರು-560001

# ವಿಧಾನ ಮಂಡಲ ಗ್ರಂಥಾಲಯ ಸಮಿತಿ

## 2004-2005

ಅಧ್ಯಕ್ಷರು

**ವಿ.ಆರ್. ಸುದರ್ಶನ್**

ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರು

**ಕೃಷ್ಣ**

ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

**ವಿಶ್ವನಾಥ್ ಪಾಟೀಲ್ ಹೆಬ್ಬಾಳ್**

ವಿಧಾನಸಭಾ ಸದಸ್ಯರು ಹಾಗೂ

ಉಪಸಮಿತಿ ಅಧ್ಯಕ್ಷರು

**ಜಿ.ಎಸ್. ಗಡ್ಡದೇವರ ಮಠ**

ವಿಧಾನಸಭಾ ಸದಸ್ಯರು

**ಆರ್. ಧ್ರುವನಾರಾಯಣ್**

ವಿಧಾನಸಭಾ ಸದಸ್ಯರು

**ಕಳಕಪ್ಪ ಜಿ. ಬಂಡಿ**

ವಿಧಾನಸಭಾ ಸದಸ್ಯರು

**ಡಾ|| ವೀರಬಸವಂತರೆಡ್ಡಿ ಮುದ್ನಾಳ್**

ವಿಧಾನಸಭಾ ಸದಸ್ಯರು

**ಡಾ|| ವಿ.ಎಸ್. ಆಚಾರ್ಯ** (ದಿನಾಂಕ 26.11.04ರವರೆಗೆ)

ವಿಧಾನಪರಿಷತ್ತಿನ ಸದಸ್ಯರು

**ಡಾ|| ಎಲ್. ಹನುಮಂತಯ್ಯ** (ದಿನಾಂಕ 26.11.04ರವರೆಗೆ)

ವಿಧಾನಪರಿಷತ್ತಿನ ಸದಸ್ಯರು

**ಡಾ|| ಚಂದ್ರಶೇಖರ ಬಿ. ಕಂಬಾರ**

ವಿಧಾನಪರಿಷತ್ತಿನ ಸದಸ್ಯರು

**ವಿಠಲ ಹೆರೂರು** (ದಿನಾಂಕ 26.11.04 ರಿಂದ)

ವಿಧಾನಪರಿಷತ್ತಿನ ಸದಸ್ಯರು

**ಖಾಜ್ಞಿ ಅರಶದ ಅಲಿ** (ದಿನಾಂಕ 26.11.04ರಿಂದ)

ವಿಧಾನಪರಿಷತ್ತಿನ ಸದಸ್ಯರು

# ಪ್ರತಿಭಾವಂತ ಸಂಸದೀಯ ಪಟುಗಳ ಪುಸ್ತಕ ಮಾಲಿಕೆ

## ಸಂಪಾದಕ ವರ್ಗ

## ಕರ್ನಾಟಕ ವಿಧಾನಸಭೆ ಸಚಿವಾಲಯ

### ಅಧಿಕಾರಿ ವರ್ಗ

| | |
|---|---|
| ಟಿ. ರಾಜಣ್ಣ | ಕಾರ್ಯದರ್ಶಿ |
| ಎಸ್.ಬಿ. ಪಾಟೀಲ್ | ಅಪರ ಕಾರ್ಯದರ್ಶಿ |
| ಕೆ.ಎನ್. ಪ್ರಭಾಕರ್‌ರಾವ್ | ಜಂಟಿ ಕಾರ್ಯದರ್ಶಿ |
| ಪಿ. ಓಂಪ್ರಕಾಶ್ | ಸಭಾಧ್ಯಕ್ಷರ ಕಾರ್ಯದರ್ಶಿ |
| ಎಸ್. ಬಸವರಾಜ | ಉಪ ಕಾರ್ಯದರ್ಶಿ (ಪ್ರ) |
| ಮಿರ್ಜಾ ಮೆಹ್ದಿ | ಅಧೀನ ಕಾರ್ಯದರ್ಶಿ |
| ನರಸಿಂಹಮೂರ್ತಿ | ಶಾಖಾಧಿಕಾರಿ |
| ಅನಸೂಯ ಎನ್. ದೇವಗಿರಿ | ಸಹಾಯಕ ಗ್ರಂಥಪಾಲಕಿ |

## ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

| | |
|---|---|
| ಕೆ. ಜಯಶಂಕರ ಮೂರ್ತಿ | ಕಾರ್ಯದರ್ಶಿ(ಪ್ರ) |
| ವಿ. ಶ್ರೀಶ್ | ಸಭಾಪತಿಯವರ ಕಾರ್ಯದರ್ಶಿ |

## ಸಂಪಾದಕರು

**ಎಲ್.ಎನ್. ಮುಕುಂದರಾಜ್**
ಕನ್ನಡ ಉಪನ್ಯಾಸಕರು
(ಅನ್ಯಕರ್ತವ್ಯದ ಮೇರೆಗೆ)

# ಮುನ್ನುಡಿ

ದೇಶದ ಸ್ವಾತಂತ್ರ್ಯ ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದ ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿರುವ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಕಿರುಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ಡಾ|| ರಾಮಮನೋಹರ ಲೋಹಿಯಾ, ಡಾ|| ಬಿ.ಆರ್. ಅಂಬೇಡ್ಕರ್, ಡಾ|| ಶಾಂಪ್ರಸಾದ್ ಮುಖರ್ಜಿ, ಡಾ|| ರಾಜೇಂದ್ರ ಪ್ರಸಾದ್ ಮೊದಲಾದ ಗಣ್ಯರ ಪುಸ್ತಕಗಳನ್ನು ನಾವು ಕನ್ನಡದಲ್ಲಿ ಭಾಷಾಂತರಿಸಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸ ಬಯಸುತ್ತೇವೆ.

ಹಾಗೆಯೇ, ರಾಜ್ಯದ ಸಂಸದೀಯ ಪಟುಗಳಾದ ಅನೇಕ ಮಹನೀಯರನ್ನು ಕುರಿತು ಕಿರುಹೊತ್ತಿಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು, ವಿಧಾನ ಮಂಡಲದ ಗ್ರಂಥಾಲಯ ಸಮಿತಿಗೆ ವಹಿಸಲಾಗಿತ್ತು. ಈ ಉಪ ಸಮಿತಿಯು ಕಾರ್ಯಪ್ರವೃತ್ತವಾಗಿ ರಾಜ್ಯದ ವಿಶ್ವವಿದ್ಯಾಲಯಗಳ ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸಲು ನಿರ್ಧರಿಸಿತು.

ಈ ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆ.ಸಿ. ರೆಡ್ಡಿ, ಶ್ರೀ ದೇವರಾಜ ಅರಸು, ಶ್ರೀ ಜೆ.ಹೆಚ್. ಪಟೇಲ್, ಶ್ರೀ ಟಿ.ಆರ್. ಶಾಮಣ್ಣ, ಶ್ರೀ ಎಸ್.ಡಿ. ಗಾಂವಕರ್, ಬಿ.ಎಲ್. ಸುಬ್ಬಮ್ಮ, ಡಾ|| ಲಂಕಾ ಸುಂದರಂ ಹಾಗೂ ಇನ್ನು ಹಲವು ಗಣ್ಯರ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

ಈಗ ಶ್ರೀ ಜೆ.ಜಿ. ನಾಗರಾಜ ಬೇತಮಂಗಲ, ಇವರು ರಚಿಸಿರುವ ರಾಜ್ಯದ ಹಿರಿಯ ಸಂಸದೀಯ ಪಟುವಾಗಿದ್ದ ಶ್ರೀ ಎಂ.ವಿ. ಕೃಷ್ಣಪ್ಪ ಬಗೆಗಿನ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆಯೆನಿಸುತ್ತದೆ. ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗೂ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪ ಸಮಿತಿಯ ಅಧ್ಯಕ್ಷರಿಗೂ ಹಾಗು ಸದಸ್ಯರುಗಳಿಗೂ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಪುಸ್ತಕವು ಮಾನ್ಯ ಸದಸ್ಯರುಗಳಿಗೆ, ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಹೆಚ್ಚಿನ ಅನುಭವ ನೀಡುತ್ತವೆ ಮತ್ತು ಉಪಯುಕ್ತವಾಗುತ್ತವೆಂದು ಭಾವಿಸುತ್ತೇವೆ.

**ವಿ.ಆರ್. ಸುದರ್ಶನ್**
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

**ಕೃಷ್ಣ**
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

**ಬೆಂಗಳೂರು,**
4ನೇ ಆಗಸ್ಟ್ 2005

# ಲೇಖಕರ ಮಾತು

ಕೆಲವರು ಸತ್ತು ಬದುಕಿರುತ್ತಾರೆ. ಇನ್ನೂ ಕೆಲವರು ಬದುಕಿಯೂ ಸತ್ತಂತೆ ಇರುತ್ತಾರೆ. ಈ ಸಾರ್ವಕಾಲಿಕ ಮಾತು ದಿಟವೇ ಸರಿ. ಎಂ.ವಿ. ಕೃಷ್ಣಪ್ಪನವರು ದಿವಂಗತರಾಗಿದ್ದಾರೆ. ಆದರೆ ಅವರು ಈ ದೇಶದ ರೈತರ, ಸಾಮಾನ್ಯ ಜನರ ಮನಸ್ಸುಗಳಲ್ಲಿ ಶಾಶ್ವತವಾಗಿ ಬದುಕಿದ್ದಾರೆ. ಈ ದಿನ ದೇಶದಲ್ಲಿ ಹಾಲಿನಿಂದ ಕೋಟ್ಯಾಂತರ ಆದಾಯ ಬರುತ್ತಿದೆ ಎಂದರೆ ಇದಕ್ಕೆ ಕಾರಣಪುರುಷ ಎಂ.ವಿ.ಕೆ.

ನಮ್ಮ ದೇಶಕ್ಕೆ 'ಸೀಮೆಹಸು'ಗಳನ್ನ ಪರಿಚಯಿಸಿದ್ದು ಎಂ.ವಿ.ಕೆ. ಇಂತಹ ಮಹಾನುಭಾವರ ಬಗ್ಗೆ ಪುಸ್ತಕ ಬರೆಯುತ್ತಿದ್ದೇನೆ ಎಂದು [illegible] ಹಳ್ಳಿಗರೂ, ಪಟ್ಟಣಿಗರೂ ಹೃದಯತುಂಬಿ ಶ್ಲಾಘಿಸಿದರು. ಏಕೆಂದರೆ ಶ್ರೀ ಎಂ.ವಿ.ಕೆ. ಅವರ ಸೇವೆ ಅತ್ಯಂತ ಶ್ರೇಷ್ಟಮಟ್ಟದ್ದು.

ಎಂ.ವಿ.ಕೆ. ಅವರು ಅತ್ಯಂತ ಸಣ್ಣ ವಯಸ್ಸಿಯಲ್ಲಿಯೇ ಕೇಂದ್ರದಲ್ಲಿ ಸಚಿವ ಸ್ಥಾನವನ್ನು ಅಲಂಕರಿಸಿದವರು. ರಾಜ್ಯದ ಮಂತ್ರಿಗಳಾಗಿ ಅವರು ಸಲ್ಲಿಸಿದ ಸೇವೆ ಶ್ರೇಷ್ಠಮಟ್ಟದ್ದು, ಅನುಕರಣೀಯವಾದ್ದು, ಅನನ್ಯವಾದದ್ದು. ಇಂತಹ ಮಹನುಭಾವನ ಹೆಸರನ್ನು ಸ್ಮರಿಸದ ರೈತನೇ ಇಲ್ಲ. ಇಂತಹ ಹೋರಾಟಗಾರನ ಚರಿತ್ರೆ ಅಮೋಘ. ಈತನ ಆದರ್ಶವಂತಿಕೆಯ ಗುಣಗಾನವೇ ಪುಣ್ಯ.

ಎಂ.ವಿ.ಕೆ. ಅವರು ನಮ್ಮನ್ನು ಅಗಲಿ ಎರಡು ದಶಕಗಳಿಗಿಂತಲೂ ಹೆಚ್ಚಾಯ್ತು. ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ "ಪ್ರತಿಭಾವಂತ ಸಂಸದೀಯ ಪಟು ಮಾಲಿಕೆ"ಯಲ್ಲಿ ಎಂ.ವಿ.ಕೆ. ಅವರ ಬದುಕು–ಬರಹ ಕುರಿತು ಬರೆಯಲು ನನಗೆ ಸೂಚಿಸಿದ್ದು ಅವರದೇ ಜಿಲ್ಲೆಯವನಾದ ನನಗೆ ಅಪಾರ ಸಂತಸ ನೀಡಿದೆ.

ಈ ಪುಸ್ತಕ ರಚನೆಯನ್ನು ನಿರ್ವಹಿಸಲು ಕಾರಣರಾದ ವಿಧಾನಮಂಡಲದ ಎಲ್ಲಾ ಗಣ್ಯವ್ಯಕ್ತಿಗಳಿಗೆ ನನ್ನ ಧನ್ಯವಾದಗಳು ಹಾಗೂ ಪುಸ್ತಕ ರಚನೆಗೆ ಸಹಕರಿಸಿದ ಗ್ರಂಥಾಲಯದ ಸಿಬ್ಬಂದಿಗೆ, ಮತ್ತು ಗ್ರಂಥಾಲಯ ಸಹಾಯಕರಾಗಿ ಆರಂಭದಿಂದ ನನ್ನ ಜೊತೆಗಿದ್ದ ಮಂಜುನಾಥ್ ವಿ. ಅವಶ್ಯಕತೆಗೆ ಅನುಗುಣವಾಗಿ ಜೆರಾಕ್ಸ್ ಮಾಡಿಕೊಟ್ಟ ಮಂಜುನಾಥ್ ಶ್ರದ್ಧೆಯಿಂದ ಕಾರ್ಯನಿರ್ವಹಿಸಿದ ಡಿ.ಟಿ.ಪಿ. ಶಾಖೆಯ ವಿಜಯ್, 'ನಮನ' ಪುಸ್ತಕಕ್ಕೆ ಪತ್ರಕರ್ತರಾದ ಜೆ.ಜಿ.ಎಸ್. ಮೂರ್ತಿ ಹಿರಿಯ ಗೆಳೆಯರಾದ ಎಲ್.ಎನ್. ಮುಕುಂದರಾಜ್‌ಗೆ ಹಾಗೂ ಅಧೀನ ಕಾರ್ಯದರ್ಶಿ ಮಿರ್ಜಾ ಮೆಹ್ದಿ ಇವರಿಗೆಲ್ಲಾ ವಂದನೆಗಳನ್ನು ಸಲ್ಲಿಸುತ್ತೇನೆ.

ಪುಸ್ತಕ ರಚನೆ ಕಾರ್ಯವನ್ನು ಹಿಂದಿನ ಸರ್ಕಾರ ನನಗೆ ಒಪ್ಪಿಸಿತ್ತು. ಅಂದಿನ ಮುಖ್ಯಮಂತ್ರಿಗಳಾದ ಎಸ್.ಎಂ. ಕೃಷ್ಣ, ಸಭಾಧ್ಯಕ್ಷರಾದ ಎಂ.ವಿ. ವೆಂಕಟಪ್ಪ, ಸಭಾಧ್ಯಕ್ಷರ ಆಪ್ತ ಕಾರ್ಯದರ್ಶಿ ಆರ್. ರಾಜಶೇಖರ್ ಹಾಗೂ ಗ್ರಂಥಾಲಯ ಸಮಿತಿ ಅಧ್ಯಕ್ಷರಾಗಿದ್ದ ಬಿ.ಬಿ. ಶಿವಪ್ಪ ಇವರಿಗೆಲ್ಲಾ ನಾನು ಕೃತಜ್ಞನಾಗಿರುತ್ತೇನೆ.

ನನ್ನ ಪುಸ್ತಕ ರಚನೆಗೆ ಸಂಪೂರ್ಣವಾಗಿ ಸಹಕರಿಸಿದ ನನ್ನ ಕಾಲೇಜಿನ ಸಿಬ್ಬಂದಿ ವರ್ಗಕ್ಕೆ, ನನ್ನ ಕಾರ್ಯ ನಿರ್ವಿಘ್ನವಾಗಿ ನೆರವೇರಲು ಸಹಕರಿಸಿದ ನಮ್ಮ ಮನೆಯ ಎಲ್ಲಾ ಸದಸ್ಯರಿಗೂ ಹಾಗೂ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಸಹಕರಿಸಿದ ಎಲ್ಲರಿಗೂ ಧನ್ಯವಾದಗಳು.

ವಿಧಾನಪರಿಷತ್ ಸಭಾಪತಿ ವಿ.ಆರ್. ಸುದರ್ಶನ ಅವರ ನೇರ ನಡೆನುಡಿಗಳಿಂದ ಹಾಗೂ ಪ್ರಾಮಾಣಿಕ ಪ್ರಯತ್ನದಿಂದಲೇ ನಾನು ಆದಷ್ಟು ಬೇಗ ಪುಸ್ತಕ ಬರೆದುಕೊಡಲು ಸಾಧ್ಯವಾಯಿತು ಈ ದೃಷ್ಟಿಯಿಂದ ವಿ.ಆರ್. ಸುದರ್ಶನ್ ಅವರಿಗೆ ನನ್ನ ಗೌರವಪೂರ್ವಕ ಧನ್ಯವಾದಗಳು.

**ಜೆ.ಜಿ. ನಾಗರಾಜ ಬೇತಮಂಗಲ**

# ಅಧ್ಯಾಯಗಳು

## ಭಾಗ – 1

ಪುಟ ಸಂಖ್ಯೆ



## ಭಾಗ – 2

## ಲೋಕಸಭೆಯಲ್ಲಿ ಕೃಷಿ ಪಂಡಿತ ಎಂ.ವಿ. ಕೃಷ್ಣಪ್ಪ

## ಭಾಗ – 3

## ವಿಧಾನಮಂಡಲದಲ್ಲಿ ಎಂ.ವಿ. ಕೃಷ್ಣಪ್ಪ

## ಭಾಗ – 4

## ಗಣ್ಯರಿಂದ ಶ್ರದ್ಧಾಂಜಲಿ



## ಭಾಗ – 5

## ಅನುಬಂಧಗಳು

“ಹುಲ್ಲಾಗು ಬೆಟ್ಟದಡಿ, ಮನೆಗೆ ಮಲ್ಲಿಗೆಯಾಗು

ಕಲ್ಲಾಗು ಕಷ್ಟಗಳ, ವಿಧಿ ಮಳೆ ಸುರಿಯೆ

ಬೆಲ್ಲಸಕ್ಕರೆ ಯಾಗು, ದೀನ ದುರ್ಬಲರಿಂಗೆ

ಎಲ್ಲರೊಳಗೊಂದಾಗು ಮಂಕುತಿಮ್ಮ”

ಡಿ.ವಿ.ಜಿ. ರವರ ಚಿನ್ನದಂತ ಈ ಮಾತುಗಳು ಚಿನ್ನದ ಬೀಡಾದ ಕೋಲಾರ ಜಿಲ್ಲೆಯಿಂದ ಬಂದಿದ್ದು. ಡಿ.ವಿ.ಜಿ. ರವರ ಮಾತನ್ನು ಅಕ್ಷರಶಃ ದಿಟವೆಂದು ತೋರಿಸಿ ಕೊಟ್ಟವ ಒಬ್ಬ ಧೀಮಂತ ನಾಯಕ. ಈತನ ಸಚ್ಚರಿತ್ರೆ ಮೈನವಿರೇಳಿಸುವಂತಹದು. ಈ ಮಹಾನ್ ವ್ಯಕ್ತಿ ಬೇರೆ ಯಾರೂ ಅಲ್ಲ ಬಡವರ ಕಲ್ಪವೃಕ್ಷ, ಕೃಷಿಕರ ಕಾಮಧೇನು, ಗ್ರಾಮೀಣ ಜನತೆಯ ಚಿಂತಾಮಣಿ ಶ್ರೀ ಎಂ.ವಿ. ಕೃಷ್ಣಪ್ಪ.

ಕರ್ನಾಟಕದ ಅತ್ಯಂತ ಹಿಂದುಳಿದ ಜಿಲ್ಲೆ ಕೋಲಾರ. ಕೋಲಾರ ಎಂದರೆ ಹೀನವಾದ, ಹಿಂದುಳಿದ ಎಂಬರ್ಥ ನೀಡುತ್ತದೆ. ಆದರೆ ಆಳರಸರಾದ ಬ್ರಿಟೀಷರ ಹದ್ದಿನ ಕಣ್ಣಿಗೆ ಈ ಪ್ರಾಂತ್ಯ ಬಿದ್ದಿದ್ದೇ ತಡ ಹೀನವಾದ ಪ್ರದೇಶ ಚಿನ್ನದ ಬೀಡಾಗಿ ಪ್ರಪಂಚದ ಭೂಪಟದಲ್ಲಿ ಸೇರಿಹೋಯಿತು. ಇಂತಹ ಕೋಲಾರ ಜಿಲ್ಲೆಯ ಮುಳಬಾಗಿಲು ತಾಲ್ಲೂಕಿನ “ಮೋತಕಪಲ್ಲಿ” ಎಂಬ ಕುಗ್ರಾಮದಲ್ಲಿ ನೆಲೆಸಿದ್ದವರು ಶ್ರೀಯುತರಾದ ವೆಂಕಟರಾಮೇಗೌಡ ಹಾಗೂ ಶ್ರೀಮತಿ ಚಂಗಮ್ಮನವರು. ಇವರಿಗೆ ಐದು ಜನ ಗಂಡು ಮಕ್ಕಳು ಇಬ್ಬರು ಹೆಣ್ಣು ಮಕ್ಕಳು. ಶ್ರೀಯುತ ಎಂ.ವಿ. ಕೃಷ್ಣಪ್ಪನವರು ಮೂರನೆಯ ಮಗನಾಗಿ ಒಂದನೇ ಜೂನ್ 1918ರಲ್ಲಿ ಮೊತಕಪಲ್ಲಿಯಲ್ಲಿ ಜನಿಸಿದರು.

ಎಂ.ವಿ. ಕೃಷ್ಣಪ್ಪನವರ ತಂದೆ ತಾತಂದಿರು ರೈತಾಪಿ ಜನರಾಗಿದ್ದು, ಸುತ್ತಮುತ್ತಲಿನ ಗ್ರಾಮಗಳಿಗೆ ಹೆಸರು ವಾಸಿಯಾಗಿದ್ದರು. 1888ರಲ್ಲಿ ಮೈಸೂರಿನ “ಕೃಷಿ ಹಾಗೂ ಕೈಗಾರಿಕೆ ವಸ್ತು ಪ್ರದರ್ಶನ”ದಲ್ಲಿ ಎಂ.ವಿ.ಕೆ. ನವರ ತಂದೆ ‘ಆದರ್ಶರೈತ’ ಎಂದು ಪ್ರಶಸ್ತಿ ಫಲಕವನ್ನು ಬಹುಮಾನವನ್ನು ಪಡೆದಿದ್ದರು. ತಂದೆಯ ಹಾಗೆ ಎಂ.ವಿ.ಕೆ (ಎಂ.ವಿ. ಕೃಷ್ಣಪ್ಪ) ಸಹಾ ಬೇಸಾಯದಲ್ಲಿ, ಹೈನುಗಾರಿಕೆಯಲ್ಲಿ ಪರಮಾಸಕ್ತಿಯನ್ನು ಬಾಲ್ಯದಲ್ಲಿಯೇ ಬೆಳೆಸಿಕೊಂಡಿದ್ದರು. (ಬೆಳೆಯುವ ಸಿರಿ ಮೊಳಕೆಯಲ್ಲೆ) ಎಂ.ವಿ.ಕೆ. ಅವರಿಗೆ ಹಸುಗಳೆಂದರೆ ಪಂಚಪ್ರಾಣ ಮುಂದೆ ತಮ್ಮ ಮನೆಗೆ ‘ಗೋಕುಲ’ ಎಂದೆ ನಾಮಕರಣ ಮಾಡಿಸುವರು.

ಎಂ.ವಿ. ಕೃಷ್ಣಪ್ಪವರು ಬಾಲ್ಯದಲ್ಲಿ ಎಲ್ಲರ ಗಮನ ಸೆಳೆಯುವಂತೆ ಉತ್ಸಾಹದ ಚಿಲುಮೆಯಾಗಿದ್ದರು. ಮನೆಯ ಕಾರ್ಯಗಳಿಂದ ಹಿಡಿದು ಬೇಸಾಯದ ಕೆಲಸ, ಗೋಪಾಲಕನ ಕಾರ್ಯ, ಸ್ನೇಹಿತರ ಹತ್ತಿರ ಒಡನಾಟ, ಶಾಲೆಯಲ್ಲಿ ಉತ್ತಮ ವಿದ್ಯಾರ್ಥಿ.

ಎಂ.ವಿ. ಕೃಷ್ಣಪ್ಪನವರು ಪ್ರಾಥಮಿಕ ಶಿಕ್ಷಣವನ್ನು ಸ್ವಗ್ರಾಮವಾದ ಮೋತಕಪಲ್ಲಿಯಲ್ಲಿ ಮುಗಿಸಿದರು. ಆನಂತರ ಮಾಧ್ಯಮಿಕ ಶಿಕ್ಷಣವನ್ನು ಬೆಂಗಳೂರಿನ ಬಸವನಗುಡಿ ಶಾಲೆಯಲ್ಲಿ ಪಡೆದರು. ತದನಂತರ ಪ್ರೌಢಶಾಲಾ ವಿದ್ಯಾಭ್ಯಾಸ ಪಡೆಯಲು ಕೋಲಾರ ಚಿನ್ನದ ಪ್ರದೇಶ ಬಂಗಾರುಪೇಟೆಗೆ ಬಂದು ಸೇರಿದರು. ಇಲ್ಲಿ ಎಂ.ವಿ.ಕೆ. ಅವರು ರಾಷ್ಟ್ರಪ್ರೇಮವನ್ನು ತಮ್ಮ ಉಸಿರಿನ ಕಣಕಣದಲ್ಲೂ ತುಂಬಿಸಿಕೊಂಡರು.

ತಮ್ಮ ಸಹೋದರನಾದ ಎಂ.ವಿ. ವೆಂಕಟಪ್ಪನವರನ್ನು 1942ರಲ್ಲಿ ಹರಿಜನರ ಹಾಸ್ಟೆಲ್‌ನಲ್ಲಿ ಅಧ್ಯಯನ ಮಾಡುವುದಕ್ಕೆ ಸೇರಿಸಿದ ಜಾತ್ಯಾತೀತ ವ್ಯಕ್ತಿ ಎಂ.ವಿ.ಕೆ.

ಕೆ.ಜಿ.ಎಫ್. ಬಡತನದ ಬವಣೆಯಲ್ಲಿ ಬಳಲುತ್ತಿತ್ತು. ಆದರೆ ಅಲ್ಲಿ ಟನ್‌ಗಟ್ಟಲೇ ಚಿನ್ನವಿದ್ದ ಸಂಗತಿ ಬ್ರಿಟೀಷರಿಗೆ ಮಾತ್ರ ತಿಳಿಯಿತು. ಈ ದಿಸೆಯಲ್ಲಿ ಕೆ.ಜಿ.ಎಫ್.ನಲ್ಲಿ ಗಣಿ ಸ್ಥಾಪನೆ ಮಾಡಿದರು. ಇದಕ್ಕೆ ವಿದ್ಯುತ್ ಬೇಕಾಗಿತ್ತು. ವಿದ್ಯುತ್‌ನ್ನು ಪಡೆಯಲು ಶಿವನಸಮುದ್ರ (ಶಿಂಷಾ)ದ ಯೋಜನೆ ರೂಪಿಸಿದರು. ಭಾರತದಲ್ಲಿ ಪ್ರಪಥಮ 'ವಿದ್ಯುತ್ ಯೋಜನೆ' ಶಿವನಸಮುದ್ರದ್ದು. ಅದರ ಉಪಯೋಗ ಕೆ.ಜಿ.ಎಫ್. ಗಣಿಗೆ. ಗಣಿಗಾರಿಕೆಯಲ್ಲಿ ಕೆಲಸ ಮಾಡುತ್ತಿದ್ದ ಕಾರ್ಮಿಕರಿಗೆ ಸರಿಯಾದ ಸಂಬಳ ನೀಡುತ್ತಿರಲಿಲ್ಲ. ಶ್ರಮಿಕರ ಬದುಕು ನರಕ ಸದೃಶ್ಯ. ತಿಂಗಳ ಸಂಬಳ ನೀಡದೆ ಅಲೆದಾಡಿಸುತ್ತಾ ಸತಾಯಿಸುತ್ತಿದ್ದರು.

ಎಂ.ವಿ. ಕೃಷ್ಣಪ್ಪನವರು ಕೆ.ಜಿ.ಎಫ್.ನಲ್ಲಿ ಪ್ರೌಢಶಾಲಾ ವಿದ್ಯಾರ್ಥಿಯಾಗಿ ಅಧ್ಯಯನ ಮಾಡುತ್ತಿದ್ದರು. ಗಣಿ ಕಾರ್ಮಿಕರ ಸಮಸ್ಯೆಗಳು ಎಂ.ವಿ.ಕೆ. ಅವರ ಮನಸ್ಸನ್ನು ಕದಡಿಸಿತು. ಸ್ವಾತಂತ್ರ್ಯದ ಹುರುಪು, ಹುಮ್ಮಸ್ಸು ಅವರಲ್ಲಿ ತುಂಬಿತು. ತಾನು ಪ್ರೌಢಶಾಲಾ ವಿದ್ಯಾರ್ಥಿ ಎಂಬುದನ್ನು ಮರೆತು ಬ್ರಿಟಿಷರ ವಿರುದ್ಧ ಬಂಡಾಯದ ಬಾವುಟ ಹಾರಿಸಿಯೇ ಬಿಟ್ಟರು. ಇದು ಎಂ.ವಿ.ಕೆ. ಅವರ ಸ್ವಾತಂತ್ರ್ಯ ಹೋರಾಟದ ಪ್ರಥಮ ಹೆಜ್ಜೆ.

ಗಣಿ ಕಾರ್ಮಿಕರ ನಾಯಕತ್ವ ವಹಿಸಿದ ಎಂ.ವಿ. ಕೃಷ್ಣಪ್ಪನವರು ಅವರ ಬೆನ್ನೆಲುಬಾಗಿ ನಿಂತರು. ಎಲ್ಲರನ್ನು ತಮ್ಮೆಡೆಗೆ ಸೆಳೆದುಕೊಳ್ಳುವಂತಹ ಭಾಷಣವನ್ನು ನೀಡಲಾರಂಭಿಸಿದರು. ಎಂ.ವಿ.ಕೆ. ಅವರ ಮಾತಿನ ಧಾಟಿಗೆ ಭಾಷಣದ ಶೈಲಿಗೆ ಎಲ್ಲರೂ ವಿಸ್ಮಿತರಾದರು. ಎಲ್ಲರು ಅವರ ಹಿಂಬಾಲಕರಾಗಿ ತಮ್ಮ ನಾಯಕರನ್ನಾಗಿ ಮಾಡಿಕೊಂಡರು.

ಎಂ.ವಿ.ಕೆ. ಅವರ ನೇತೃತ್ವ ಶ್ರಮಿಕರ ಬದುಕಿಗೆ ಆಶಾಕಿರಣವಾದರೆ ಬ್ರಿಟೀಷರಿಗೆ ನುಂಗಲಾರದ ಬಿಸಿ ತುಪ್ಪವಾಯಿತು. ಜಾನ್‌ಟೇಲರ್‌ನ ಉಸ್ತುವಾರಿಕೆಯಲ್ಲಿ ಗಣಿಗಾರಿಕೆಯ ಕೆಲಸಕಾರ್ಯಗಳು ನಡೆಯುತಿತ್ತು. ಅಲ್ಲಿನ ಕಾರ್ಮಿಕರನ್ನು ಹೀನವಾಗಿ ನಡೆಸಿಕೊಳ್ಳುತ್ತಿದ್ದರು. ಈ ಸಂದರ್ಭದಲ್ಲಿ ಕಾರ್ಮಿಕರ ಹೋರಾಟ ಉಗ್ರರೂಪ ತಾಳಿತ್ತು. ಇದರ ಮುಂಚೂಣಿಯನ್ನು ಎಂ.ವಿ.ಕೆ. ವಹಿಸಿದ್ದರು. ಬ್ರಿಟೀಷ್ ಅಧಿಕಾರಿಗಳು ಈ ಗಣಿ ಕಾರ್ಮಿಕರ ಹೋರಾಟದ ರುವಾರಿ ಯಾರೆಂದು ಅಧ್ಯಯನ ಮಾಡಿ ಇದಕ್ಕೆಲ್ಲಾ ಎಂ.ವಿ.ಕೆ. ಅವರೇ ಕಾರಣ ಎಂದು ತೀರ್ಮಾನಿಸಿ ಎಂ.ವಿ.ಕೆ. ಅವರನ್ನು ಗಡೀಪಾರು ಮಾಡಿದರು.

ಎಂ.ವಿ. ಕೃಷ್ಣಪ್ಪನವರು ಪ್ರೌಢಶಾಲೆ ವಿದ್ಯಾರ್ಥಿಯಾಗಿದ್ದರೂ ಅವರಿಗೆ ಕೆ.ಜಿ.ಎಫ್. ಗಣಿ ಕಾರ್ಮಿಕರ ಬಗೆಗೆ ಅತೀ ಹೆಚ್ಚಿನ ಕಾಳಜಿ ಇತ್ತು. ಅಲ್ಲಿನ ಅಧಿಕಾರಿಗಳು ಕಾರ್ಮಿಕರಿಗೆ ಶೋಷಣೆಯನ್ನು ನೀಡುತ್ತಿದ್ದರು. ಎಂ.ವಿ.ಕೆ. ಕಾರ್ಮಿಕರ ಪರವಾಗಿ ನಿಂತು ಬ್ರಿಟಿಷರ ವಿರುದ್ಧ ಕೆ.ಜಿ.ಎಫ್.ನಲ್ಲಿ ತಮ್ಮ ಪ್ರಪ್ರಥಮ ಬಂಡಾಯದ ಬಾವುಟವನ್ನು ಹಾರಿಸಿದರು. ಇದಕ್ಕೆ ಎಂ.ವಿ.ಕೆ.ಗೆ ಸಿಕ್ಕಫಲ 'ಗಡೀಪಾರು' ಎಂ.ವಿ.ಕೆ.ಯವರು ಇದರಿಂದ ಧೃತಿಗೆಡಲಿಲ್ಲ. ಕರ್ನಾಟಕದ ಗಡಿಭಾಗವಾದ ರಾಜಪೇಟ ರಸ್ತೆಯ ಭಾಗದಲ್ಲಿ (ಆಂಧ್ರಗಡಿ) ಉಳಿದುಕೊಂಡು ಹೋರಾಟಗಾರರಿಗೆ ಮಾರ್ಗದರ್ಶನ ನೀಡುತ್ತಿದ್ದರು. ಈಗಲೂ ಆ ಭಾಗದ (ರಾಜಪೇಟೆ ರಸ್ತೆ ಜನ) ಹಳೆಯ ತಲೆಮಾರಿನವರು ಎಂ.ವಿ. ಕೃಷ್ಣಪ್ಪನವರ ಸಾಮರ್ಥ್ಯವನ್ನು ಹೊಗಳುವರು. ಅವರಿಗೆಲ್ಲಾ ಎಂ.ವಿ.ಕೆ. ದಂತಕಥೆಯಾಗಿ ಹೋಗಿದ್ದಾರೆ.

ಎಂ.ವಿ. ಕೃಷ್ಣಪ್ಪನವರು ಮುಂದಿನ ವಿದ್ಯಾಭ್ಯಾಸಕ್ಕೆಂದು ಮೈಸೂರಿನ ಕಡೆ ಮುಖ ಮಾಡಿದರು. ಆಗ ಸ್ವಾತಂತ್ರ್ಯದ ಬಿಸಿ ಆಕಾಶಕೇರುತ್ತಿದ್ದ ದಿನಗಳವು. ಪ್ರೌಢಶಾಲಾ ಹೋರಾಟದ ದಿನಗಳು – ಮನಸ್ಸಿನಿಂದ ಇನ್ನೂ ಮಾಸಿರಲಿಲ್ಲ. ಮೈಸೂರಿನ ಸ್ವಾತಂತ್ರ್ಯ ಹೋರಾಟದ ಸ್ಥಳ ಇವರ ಮನಸ್ಸನ್ನು ಕದಡಿಸಿತು. ಮೈಸೂರಿನಲ್ಲಿ ಬಿ.ಎ. ವ್ಯಾಸಂಗವನ್ನು ಮಾಡುವಾಗ. ಮಹಾರಾಜ ಕಾಲೇಜಿನ 'ವಿದ್ಯಾರ್ಥಿನಾಯಕ'ನಾಗಿ ಆಯ್ಕೆಯಾದರು. ಎಂ.ವಿ.ಕೆ. ಅವರ ಮಾತಿನ ಶೈಲಿ, ಚಾಲೂಕಿತನ, ಮುತ್ಸದ್ದಿತನ, ಎಲ್ಲರ ಜೊತೆಗಿನ ಆತ್ಮೀಯತೆ ವಿದ್ಯಾರ್ಥಿಗಳೆಲ್ಲರ ಮನಸ್ಸನ್ನು ಸೆಳೆಯಿತು. ಈ ದಿಸೆಯಲ್ಲಿ ಸ್ವಾತಂತ್ರ್ಯದ ಹುರುಪನ್ನು ತುಂಬಿಸಿಕೊಂಡಿದ್ದ ಎಂ.ವಿ.ಕೆ. ಅವರು ಬ್ರಿಟೀಷರ ವಿರುದ್ಧ ವಿದ್ಯಾರ್ಥಿಗಳನ್ನು ಸಂಘಟಿಸಲಾರಂಭಿಸಿದರು.

ಎಂ.ವಿ.ಕೆ. ಅವರು ಅಮೋಘ ಭಾಷಣಕಾರರು. ಅವರ ಭಾಷಣ ಯುವಕರ ಮನಸ್ಸನ್ನು ರೊಚ್ಚಿಗೇಳಿಸುತಿತ್ತು. "ಎಂ.ವಿ.ಕೆ.ರವರ ಮಾತಿನ ಮೋಡಿಗೆ ಸಿಲುಕಿದರೆ ಅವರ ಹಿಂದೆಯೇ ಓಡಾಡಬೇಕು" ಎಂಬುದು ಅವರ ಒಡನಾಡಿಗಳ ಅನುಭವದ ಮಾತು. ಬ್ರಿಟೀಷರ ವಿರುದ್ಧ ಹೋರಾಡುತ್ತಿದ್ದ ಕಾಲೇಜಿನ ದಿನಗಳಲ್ಲಿ, ಎಂ.ವಿ.ಕೆ. ಅವರ ಹಿಂದೆ ಯುವಕರ ದಂಡು ಯಾವಾಗಲೂ ಸಜ್ಜಾಗಿರುತ್ತಿತ್ತು. ಮೈಸೂರಿನ ಅರಮನೆಯ ಮೇಲೆ ಏರಿ ರಾಷ್ಟ್ರಧ್ವಜವನ್ನು ಪ್ರಪ್ರಥಮ ಬಾರಿಗೆ ಹಾರಿಸಿದ ಖ್ಯಾತಿ ಎಂ.ವಿ. ಕೃಷ್ಣಪ್ಪನವರದ್ದು.

ಅಖಂಡ ಭಾರತದಲ್ಲಿ ಬ್ರಿಟೀಷರ ವಿರುದ್ಧ ಹೋರಾಟಕ್ಕಿಳಿದ ಮೊಟ್ಟ ಮೊದಲ "ವಿದ್ಯಾರ್ಥಿನಾಯಕ" ಎಂಬ ಖ್ಯಾತಿ ಪ್ರಶಂಸೆ, ದಾಖಲೆ ಶ್ರೀ ಎಂ.ವಿ. ಕೃಷ್ಣಪ್ಪನವರದು, ಇದು ದಿಟವೂ ಸಹ. ಸ್ವಾತಂತ್ರ್ಯ ಸಂಗ್ರಾಮಕ್ಕೆ ಮೈಸೂರಿನ ಯುವಕರ ಪಾತ್ರ ಶ್ರೇಷ್ಠಮಟ್ಟದ್ದು.

ತಮ್ಮ ವಿದ್ಯಾಭ್ಯಾಸದ ಅವಧಿಯಲ್ಲಿ ಬ್ರಿಟೀಷರ ವಿರುದ್ಧ 'ಹಸಿದ ಹೆಬ್ಬುಲಿ'ಯಾಗಿದ್ದರು. ಭಾರತೀಯತೆಯ ಕಳಕಳಿ ನೂರುಪಟ್ಟು ಹೆಚ್ಚಿತು. ಸ್ವಾತಂತ್ರ್ಯ ಚಳುವಳಿಗೆ ರಾತ್ರಿ ಹಗಲು ಎನ್ನದೆ ಕಾಯಾವಾಚಾ ಮನಸ್ಸನ್ನು ತೊಡಗಿಸಿಕೊಂಡ ಧೀಮಂತ ವ್ಯಕ್ತಿ ಎಂ.ವಿ.ಕೆ.ರವರು. ಎಂ.ವಿ.ಕೆ. ಗಾಂಧೀಜಿಯ ನಾಯಕತ್ವಕ್ಕೆ ಮನಸೋತರು.

ಎಂ.ವಿ.ಕೆ. ಅವರು ಬ್ರಿಟೀಷರ ಪಾಲಿಗೆ ತಲೆನೋವಾಗಿ ಪರಿಣಮಿಸಿದ್ದರು. ಇವರನ್ನು ಸೆರೆಹಿಡಿಯಲು ಹಲವಾರು ಬಾರಿ ಪೋಲೀಸರು ಪ್ರಯತ್ನಿಸಿ ವಿಫಲರಾದರು. ಕಾಲೇಜಿನಲ್ಲಿ 'ವಿದ್ಯಾರ್ಥಿ ಕಾಂಗ್ರೆಸ್'ನ ಅಧ್ಯಕ್ಷರಾದರು. ಕಾಲೇಜಿನ ಪ್ರಾಂಶುಪಾಲರು ಪರಂಗಿಯವರಾಗಿದ್ದರಿಂದ ಅವರಿಗೂ ಇವರಿಗೂ ಸಂಘರ್ಷ ಏರ್ಪಡುತ್ತಿತ್ತು. ಯಾವ ವಿದ್ಯಾರ್ಥಿಯೂ ಸಹ ಸ್ವಾತಂತ್ರ್ಯ ಚಳುವಳಿಯಲ್ಲಿ ಯಾವುದೇ ರೀತಿಯಲ್ಲೂ ಪಾಲ್ಗೊಳ್ಳಬಾರದೆಂದು ಪ್ರಾಂಶುಪಾಲರು ಆಜ್ಞೆ ಮಾಡಿದರು. ಎಂ.ವಿ.ಕೆ. ಅವರು ಇದಾವುದನ್ನು ಲೆಕ್ಕಿಸದೆ ಬ್ರಿಟೀಷರ ವಿರುದ್ಧ ಘೋಷಣೆ ಕೂಗುತ್ತಾ ತಮ್ಮನ್ನು ಕ್ರಿಯಾತ್ಮಕವಾಗಿ ತೊಡಗಿಸಿಕೊಂಡರು. ಎಂ.ವಿ.ಕೆ. ಅವರ ಧ್ಯೇಯ ಬ್ರಿಟೀಷರಿಂದ ಭಾರತಮಾತೆಯನ್ನು ಬಿಡುಗಡೆ ಮಾಡಬೇಕೆಂಬುದು ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಬಿ.ಎ. ವ್ಯಾಸಂಗ ಮಾಡುತ್ತಿರುವಾಗ ತರಗತಿಗಳಿಗೆ ಬಾರದೆ ಚಳುವಳಿಯಲ್ಲಿ ತೊಡಗಿಸಿಕೊಂಡರೆಂದು ಎಂ.ವಿ.ಕೆ.ರವರನ್ನು ಕಾಲೇಜಿನಿಂದ ಡಿಬಾರ್ ಮಾಡಿದರು. ವಿದ್ಯಾಸಚಿವರಿಂದ ಶಿಫಾರಸ್ಸಿನ ಪತ್ರ ತಂದರು. ಆದರೆ ಪ್ರಾಂಶುಪಾಲರು ಪತ್ರವನ್ನು ಪರಿಗಣನೆಗೆ ತೆಗೆದುಕೊಳ್ಳಲಿಲ್ಲ. 'ವಿದ್ಯಾರ್ಥಿ ನಾಯಕ'ನಾಗಿ ಆಯ್ಕೆಯಾಗಿದ್ದ ಎಂ.ವಿ.ಕೆ. ವಿದ್ಯಾರ್ಥಿಗಳನ್ನು ಸಂಘಟಿಸಿಕೊಂಡು ಪ್ರಾಂಶುಪಾಲರ ವಿರುದ್ಧ ಘೋಷಣೆಗಳನ್ನು ಕೂಗುತ್ತಾ ಬಂಡಾಯದ ರೂಪವನ್ನು ನೀಡಿದರು. ಪರಿಸ್ಥಿತಿ ಅತಿರೇಕಕ್ಕೆ ಹೋಗುವುದೆಂದರಿತ ಪ್ರಾಂಶುಪಾಲರು ಎಂ.ವಿ.ಕೆ. ಅವರನ್ನು ಮತ್ತೆ ತರಗತಿಗಳಿಗೆ ಬರುವಂತೆ ಮನವಿ ಮಾಡಿಕೊಂಡರು.

ಮತ್ತೊಂದು ಅವಧಿಯಲ್ಲಿ ಹಾಜರಾತಿ ಕೊರತೆ ಇದೆ ಎಂದು ಪ್ರಾಂಶುಪಾಲರು ಎಂ.ವಿ.ಕೆ. ಅವರನ್ನು ಪರೀಕ್ಷೆಗೆ ಕೂಡಲು ಅವಕಾಶ ನೀಡಲಿಲ್ಲ. ಎಂ.ವಿ.ಕೆ. ಅವರು ಇದೆಲ್ಲಾ ಪ್ರಾಂಶುಪಾಲರ ಕುಯುಕ್ತಿ ಎಂದು ಭಾವಿಸಿದರು. ಆದರೂ ಪ್ರಾಂಶುಪಾಲರನ್ನು ಎಲ್ಲಾ ವಿಧದಲ್ಲಿ ಬೇಡಿಕೊಂಡರೂ ಪ್ರಯೋಜನವಾಗಲಿಲ್ಲ. ಕೊನೆಗೆ ಹಾಜರಾತಿ ಪುಸ್ತಕಗಳ ಕೊಠಡಿಗೆ ಬೆಂಕಿ ಇಟ್ಟು ನಾಶ ಮಾಡಿದರು. ಕೊನೆಗೆ ಪ್ರಾಂಶುಪಾಲರು ಪರೀಕ್ಷೆಗೆ ಕೂರಲು ಅನುಕೂಲ ಮಾಡಿಕೊಟ್ಟರು.

ವಿದ್ಯಾರ್ಥಿ ಬದುಕನ್ನು ಮುಗಿಸುವಷ್ಟರಲ್ಲಿ ಎಂ.ವಿ.ಕೆ. ಅವರು ಆರು ಅಡಿ ಅಜಾನುಬಾಹುವುಳ್ಳ, ಗಂಭೀರ ಸ್ವಭಾವದ ಒಬ್ಬ ಮುತ್ಸದ್ದಿ ನಾಯಕನೆಂಬಂತೆ ಕಾಣಿಸುತ್ತಿದ್ದರು. ಸ್ವಾತಂತ್ರ್ಯ ಚಳುವಳಿಗೆ ಸಂಬಂಧಿಸಿದಂತೆ ಎಂ.ವಿ.ಕೆ. ಅವರಿಂದ ಭಾಷಣ ಇದೆ ಎಂದು ಗೊತ್ತಾದರೆ ಮೈಸೂರಿನ ಹಾಗೂ ಸುತ್ತಮುತ್ತಲಿನ ಗ್ರಾಮಗಳ ಜನ ಹುರುಪಿನಿಂದ ಜಮಾಯಿಸುತ್ತಿದ್ದರು. ಪೋಲೀಸರು ಎಂ.ವಿ.ಕೆ.ರವರನ್ನು ಹಿಡಿಯಲು ಹರಸಾಹಸ ಮಾಡುತ್ತಿದ್ದರು. ಮೈಸೂರಿನಲ್ಲಿ ಯಾವುದೇ ಒಂದು ವೇದಿಕೆಗೆ ಎಂ.ವಿ.ಕೆ.ರವರು ಭಾಷಣ ಮಾಡಲು ಬರುತ್ತಾರೆಂದು ತಿಳಿದ ಸರ್ಕಾರ ಅವರನ್ನು ಹಿಡಿಯಲು ಪೋಲೀಸರ ಸರ್ಪಗಾವಲನ್ನು ಹಾಕಿತು. ಆದರೆ ಎಂ.ವಿ.ಕೆ.ರವರು ಮಾರುವೇಶದಲ್ಲಿ ಪ್ರತ್ಯಕ್ಷವಾಗಿ ಸ್ವಾತಂತ್ರ್ಯದ ಚಳುವಳಿಗಾರರಿಗೆ ಭಾಷಣ ನೀಡಿ ಕ್ಷಣದಲ್ಲಿ ಮಾಯವಾಗಿ ಪೋಲೀಸರಿಗೆ ಚಳ್ಳೆಹಣ್ಣು ತಿನ್ನಿಸಿದರು. ತಮ್ಮ ಭಾಷಣದ ಮೂಲಕ ಹೋರಾಟಗಾರರ ಮನಸ್ಸನ್ನು ಬಡಿದೆಬ್ಬಿಸುತ್ತಿದ್ದ ಎಂ.ವಿ.ಕೆ ಬಿಳಿಜನರ ನಿದ್ದೆಕೆಡಿಸುತ್ತಿದ್ದರು. ಏನು ಮಾಡಿದರೂ ಪೋಲೀಸರ ಕೈಗೆ ಸಿಗದ ಇವರ ಮೇಲೆ

ಸರ್ಕಾರ 'ಕಂಡಲ್ಲಿ ಗುಂಡು' ಆಜ್ಞೆಯನ್ನು ಜಾರಿ ಮಾಡಿತು. ಆದರೆ ಎಂ.ವಿ.ಕೆ. ಸರ್ಕಾರದ ಆಜ್ಞೆಯನ್ನು ಲೆಕ್ಕಕ್ಕಿಡದೆ ತಮ್ಮ ಪ್ರಾಣವನ್ನು ದೇಶಕ್ಕಾಗಿ ಮೀಸಲಾಗಿರಿಸಿ ಭೂಗತರಾಗಿ ಹೋರಾಡುತ್ತಿದ್ದರು.

ಹೀಗೆ ಬ್ರಿಟೀಷ್ ಸರ್ಕಾರ ಎಂ.ವಿ.ಕೆ. ಅವರಿಗಾಗಿ ಶೋಧ ಮುಂದುವರಿಸಿತು. ಸ್ವಾತಂತ್ರ್ಯಕ್ಕಾಗಿ ಭೂಗತನಾಗಿ ಹೋರಾಡುತ್ತಿದ್ದ ಎಂ.ವಿ.ಕೆ. ರವರ ಮೇಲೆ ಪೋಲೀಸರು ಗುಂಡು ಹಾರಿಸಿಯೇ ಬಿಟ್ಟರು. ಎಂ.ವಿ.ಕೆ. ಮೇಲೆ ಹಾರಿ ಬಂದ ಬಂದೂಕಿನ ಗುಂಡು ಅವರ ಹಣೆಗೆ ಸೋಕಿಕೊಂಡು ಹೋಗಿ ಅವರ ಪ್ರಾಣವನ್ನು ಉಳಿಸಿತು. ಹಣೆಗೆ ಸೋಕಿಹೋದ ಬಂದೂಕಿನ ಗುಂಡು ಎಂ.ವಿ.ಕೆ.ರವರ ಪ್ರಾಣವನ್ನು ಉಳಿಸಿತು. ಆದರೆ ಅದರ ಗುರ್ತು ಮಾತ್ರ ಹಣೆಯ ಮೇಲೆ ಹಾಗೆಯೇ ಉಳಿಯಿತು. ಎಂ.ವಿ.ಕೆ. ರವರ ಹಣೆಬರಹದಲ್ಲಿ 'ದೇಶಸೇವೆ' ಇದ್ದಕಾರಣ ಬದುಕುಳಿದರು. ಸ್ವಾತಂತ್ರ್ಯ ಚಳುವಳಿಗೆ ಸಂಪೂರ್ಣವಾಗಿ ತೊಡಗಿಸಿಕೊಂಡು ಹೋರಾಟವನ್ನು ಮಾಡಿದ ಏಕೈಕ ವಿದ್ಯಾರ್ಥಿ ನಾಯಕ ಎಂ.ವಿ.ಕೆ.

ಎಂ.ವಿ.ಕೆ. ಅವರ ವಿದ್ಯಾಭ್ಯಾಸದ ಪ್ರಗತಿಯಲ್ಲಿ 'ಲಾ' ಅಪೂರ್ಣಗೊಂಡಿತು. ತಮ್ಮ 24ರ ಹರೆಯದ ವಯಸ್ಸಿನಲ್ಲಿ ಬ್ರಿಟೀಷರ ಆಡಳಿತ ವಿರುದ್ಧ 'ಕ್ವಿಟ್ ಇಂಡಿಯಾ' ಚಳುವಳಿಯಲ್ಲಿ ಸಂಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡು. ಈ ಚಳುವಳಿಯಿಂದ ಜೈಲುವಾಸ ಅನುಭವಿಸಿದರು.

ಜೈಲುವಾಸ ಅನುಭವಿಸುತ್ತಿದ್ದ ಎಂ.ವಿ.ಕೆ. ತನ್ನ ಚಾಲೂಕಿತನದಿಂದ ಜೈಲಿನಿಂದ ಪರಾರಿಯಾದರು. ಭೂಗತರಾದ ಎಂ.ವಿ.ಕೆ. ಚಳುವಳಿಗೆ ಬೆಂಬಲಿಗರಾಗಿ ನಿಂತರು. ಭೂಗತರಾಗಿದ್ದ ಎಂ.ವಿ.ಕೆ.ರವರು ಹಲವಾರು ತಿಂಗಳು ಊರಿನ ಕಡೆ ಮುಖವೂ ಸಹಾ ತೋರಿಸುತ್ತಿರಲಿಲ್ಲ. ಕೆಲವು ಸಲ ವೇಷ ಮರೆಸಿಕೊಂಡು ಹೊಲ–ಗದ್ದೆಗಳಲ್ಲಿ ಬಚ್ಚಿಟ್ಟುಕೊಂಡಿದ್ದು ಮನೆಯವರೆಲ್ಲರಿಗೂ ದರುಶನ ನೀಡಿ ತಮ್ಮ ಶ್ರೀಮತಿ ಪ್ರಮೀಳ ಅವರಿಗೆ ಧೈರ್ಯ ಹೇಳಿ ಮಾಯವಾಗುತ್ತಿದ್ದರು. ಊರಿನಿಂದ ಹಿಂದಿರುಗಿ ಬರುವಂತಹ ಸಂದರ್ಭದಲ್ಲಿ ರೈಲಿನಲ್ಲಿದ್ದ ಎಂ.ವಿ.ಕೆ. ಅವರನ್ನು ಹಿಡಿಯಲು ಪೋಲೀಸರು ಶೋಧಿಸುತ್ತಿದ್ದಾಗ ಚಲಿಸುವ ರೈಲಿನಿಂದ ದುಮುಕಿ ಮರೆಯಾದ ವೀರ ಎಂ.ವಿ.ಕೆ.

ಬ್ರಿಟೀಷ್ ಆಡಳಿತ ಎಂ.ವಿ.ಕೆ. ಅವರ ಚಳುವಳಿಯ ನೇತೃತ್ವವನ್ನು ಹೇಗಾದರೂ ಮಾಡಿ ಮುರಿಯಬೇಕೆಂದು ಆತನನ್ನು ಹಿಡಿಯುವಂತೆ ಕಟ್ಟಾಜ್ಞೆ ಮಾಡಿದರು. ಭೂಗತರಾಗಿದ್ದ ಎಂ.ವಿ.ಕೆ. ಶ್ರೀಮತಿಯನ್ನು ಕಾಣಲು ಊರಿಗೆ ಹೋಗಿದ್ದಾರೆಂಬ ಸುದ್ದಿ ತಿಳಿದ ಬಿಳಿಜನ ಪೋಲೀಸ್ ಸರ್ಪಗಾವಲನ್ನು ಹಾಕಿತು. ಮನೆಯೊಳಗಿದ್ದ ಎಂ.ವಿ.ಕೆ. ಪೋಲೀಸರಿಂದ ತಪ್ಪಿಸಿಕೊಳ್ಳುವ ಯೋಜನೆಯನ್ನು ರೂಪಿಸಿದರು. ಮನೆಯ ಕೆಲಸದ ಆಳು ಹಾಕಿಕೊಂಡಿದ್ದ ಬಟ್ಟೆಯನ್ನು ತಾನು ಹಾಕಿಕೊಂಡರು. ಮಾಸಿಹೋದ ಬಟ್ಟೆಯಲ್ಲಿ ಕಪ್ಪಾದ ಮುಖ ಮಾಡಿಕೊಂಡು ಕೆದರಿದ ತಲೆಗೆ ಪೇಟಾ ಕಟ್ಟಿಕೊಂಡು ತಲೆಯ ಮೇಲೆ ಇದ್ದಿಲಿನ ಮೂಟೆಯನ್ನು ಹೊತ್ತು ಪೋಲೀಸರ ಮುಂದೆಯೇ ಮನೆಯಿಂದ ಹೊರಗಡೆ ಬಂದು ಪರಾರಿಯಾದರು. ಆನಂತರ ಹೋದ ವ್ಯಕ್ತಿ ಎಂ.ವಿ.ಕೆ. ಎಂಬ ವಿಷಯ ತಿಳಿದ ಪೋಲೀಸರು 'ಇಂಗು ತಿಂದ ಮಂಗಗಳಾದರು'.

ಎಂ.ವಿ. ಕೃಷ್ಣಪ್ಪನವರಿಗೆ ಊರಿನ ಪಕ್ಕದಲ್ಲಿದ್ದ ಮೈಸೂರು ರಾಜ್ಯದ ಮೊದಲ ಮುಖ್ಯಮಂತ್ರಿ ಕ್ಯಾಸಂಬಳ್ಳಿ ಚಂಗಲರಾಯರೆಡ್ಡಿರವರ ಪರಿಚಯದ ಮಾರ್ಗದರ್ಶನ ಲಭಿಸಿತು. ಕೆ.ಸಿ. ರೆಡ್ಡಿಯವರ ಕ್ಯಾಸಂಬಳ್ಳಿ ಎಂ.ವಿ.ಕೆ. ಅವರ ಊರಿಗೆ ತುಂಬಾ ಸಮೀಪದಲ್ಲಿತು. ಈ ದೃಷ್ಟಿಯಲ್ಲಿ ಅವರಿಗೆ ಕೆ.ಸಿ.ರೆಡ್ಡಿಯವರ ಆದರ್ಶಗಳು ಇಷ್ಟವಾದವು. ಮುಂದೆ ಮದ್ರಾಸ್‌ನಲ್ಲಿ 'ಲಾ' ಅಧ್ಯಯನ ಮಾಡುವಾಗ ಕಾಮರಾಜ್, ನೀಲಂಸಂಜೀವರೆಡ್ಡಿಯವರ ಒಡನಾಟ ಲಭಿಸಿತು. 1947ರ ಮೈಸೂರು ಪ್ಯಾಲೆಸ್ ಚಳುವಳಿ ಅತ್ಯಂತ ಉಗ್ರ ರೂಪವನ್ನು ಪಡೆಯಿತು. ಇದರ ನೇತೃತ್ವ ಎಂ.ವಿ.ಕೆ. ಹಾಗೂ ಸಹೋದರ ಎಂ.ವಿ. ವೆಂಕಟಪ್ಪವರದು.

ಎಂ.ವಿ. ಕೃಷ್ಣಪ್ಪನವರ ಸಹೋದರ ಎಂ.ವಿ. ವೆಂಕಟಪ್ಪ. ಎಂ.ವಿ. ವೆಂಕಟಪ್ಪನನ್ನು ಬಂಗಾರುಪೇಟೆಯ ಶಾಲೆಯಲ್ಲಿ ಅಧ್ಯಯನ ಮಾಡಲು ಎಂ.ವಿ.ಕೆ. ರವರು ಸೇರಿಸಿ ಅಲ್ಲಿಯೇ ಇದ್ದ 'ಹರಿಜನ ಹಾಸ್ಟೆಲ್'ನಲ್ಲಿ ಸೇರಿಸಿದ್ದರು. ಈ ಮಾತನ್ನು ಶ್ರೀ ಎಂ.ವಿ. ವೆಂಕಟಪ್ಪನವರು ತುಂಬಾ ಅಭಿಮಾನದಿಂದ ಹೇಳುತ್ತಾರೆ. "ನಮ್ಮ ಅಣ್ಣನಾದ ಎಂ.ವಿ.ಕೆ. ನನ್ನನ್ನು ಹಾಸ್ಟೆಲ್‌ಗೆ ಸೇರಿಸಿದ ಕಾರಣವೇನೆಂದರೆ ಆರ್ಥಿಕ ಕಾರಣಗಳಲ್ಲ, 'ಜಾತಿ' ಎಂಬ ವಿಷಬೀಜವನ್ನು ಕಿತ್ತೊಗೆಯಬೇಕು, ಜಾತಿಯ ಹೆಸರಿನಲ್ಲಿ ಶೋಷಣೆ ತಪ್ಪಿಸಬೇಕು. ನಮ್ಮಲ್ಲಿ ಜಾತೀಯತೆ ಇರಬಾರದೆಂದು ಹರಿಜನ ಹಾಸ್ಟೆಲ್‌ಗೆ ಸೇರಿಸಿದ ಜಾತ್ಯಾತೀತ ಮಹಾನ್ ವ್ಯಕ್ತಿ" ಎಂದು ಎಂ.ವಿ.ಕೆ. ರವರನ್ನು ಸಹೋದರರಾದ ಎಂ.ವಿ. ವೆಂಕಟಪ್ಪನವರು ಗೌರವದಿಂದ ಹೊಗಳುತ್ತಾರೆ.

ಮುಂದೆ ಎಂ.ವಿ. ವೆಂಕಟಪ್ಪನವರು ಅಣ್ಣನಾದ ಎಂ.ವಿ.ಕೆ. ಆಶೀರ್ವಾದದೊಂದಿಗೆ ಬೆಳೆದು ಅರವತ್ತರ ದಶಕದಲ್ಲಿ ಪದವೀಧರ ಕ್ಷೇತ್ರದಿಂದ ಎಂ.ಎಲ್.ಸಿ.ಯಾಗಿ ಆಯ್ಕೆಯಾದರು. ಹಾಗೆಯೇ ಎಪ್ಪತ್ತರ ದಶಕದಲ್ಲಿ ಶ್ರೀ ಎಂ.ವಿ. ವೆಂಕಟಪ್ಪನವರು ಸಭಾಪತಿಯಾಗಿ ಅಧಿಕಾರಿ ಸ್ವೀಕರಿಸಿದರು. ರಾಜ್ಯ ರಾಜಕಾರಣದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತ ಎಂ.ವಿ. ವೆಂಕಟಪ್ಪನವರು ಶ್ರೀ ಎಸ್.ಎಂ.ಕೃಷ್ಣ ಅವರು ಮುಖ್ಯಮಂತ್ರಿಯಾಗಿದ್ದಾಗ ಆ ಅವಧಿಯಲ್ಲಿ ಕರ್ನಾಟಕ ವಿಧಾನಸಭೆಯ ಅಧ್ಯಕ್ಷರಾಗಿ ಅಧಿಕಾರ ಸ್ವೀಕರಿಸಿ ನಾಡಿನ ಸೇವೆಯನ್ನು ಮಾಡಿದರು.

ಈ ರೀತಿ ರಾಜ್ಯ ರಾಜಕೀಯದಲ್ಲಿ ವಿಧಾನ ಪರಿಷತ್ತಿನ 'ಸಭಾಪತಿ'ಗಳಾಗಿ, ವಿಧಾನಸಭೆಯ 'ಸಭಾಧ್ಯಕ್ಷ'ರಾಗಿ ಸೇವೆ ಸಲ್ಲಿಸಿದ ಏಕೈಕ ವ್ಯಕ್ತಿ ಎಂದರೆ ಮಾನ್ಯ ಶ್ರೀ ಎಂ.ವಿ. ವೆಂಕಟಪ್ಪನವರು. ಎಂ.ವಿ. ವೆಂಕಟಪ್ಪನವರು ತಮ್ಮ ಅಣ್ಣನ ಜೊತೆಯಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಡಿ ರಾಜ್ಯದ ಸೇವೆ ಮಾಡಿದವರು.

ಬಾಲ್ಯದಿಂದಲೂ ಸ್ವಾತಂತ್ರ್ಯದ ಕಲ್ಪನೆಯಲ್ಲೇ ಬೆಳೆದ ಎಂ.ವಿ. ಕೃಷ್ಣಪ್ಪನವರ ರಾಜಕೀಯದ ನಂಟು ಕಳ್ಳುಬಳ್ಳಿಯಂತದ್ದು. ಹಲವಾರು ಸಲ ವಿದ್ಯಾರ್ಥಿ ನಾಯಕನಾಗಿ ಆಯ್ಕೆಯಾಗಿ ಎಲ್ಲರ ಪ್ರಶಂಸೆಗೆ ಪಾತ್ರರಾಗಿದ್ದರು.

1944-47ರಲ್ಲಿ ಶ್ರೀ ಎಂ.ವಿ. ಕೃಷ್ಣಪ್ಪನವರು ಮುಳಬಾಗಲು ಕ್ಷೇತ್ರದಿಂದ ಮೈಸೂರು 'ಪ್ರಜಾಪ್ರತಿನಿಧಿ' ಸಭೆಗೆ ಚುನಾಯಿತರಾಗಿ ಹೋದರು. ತಮ್ಮ ನೇರ ನಡೆ ನುಡಿಯಿಂದ ಮೈಸೂರಿನ ಪ್ರಜಾಪ್ರತಿನಿಧಿಯ ಸಭೆಗಳಲ್ಲಿ ಎಲ್ಲರ ಮನಸ್ಸುಗಳನ್ನು ಗೆದ್ದವರು. ಎಂ.ವಿ.ಕೆ. ಅವರು 1947ರಿಂದ 1952ರವರೆಗಿನ ತಮ್ಮ ರಾಜಕೀಯ ಹೆಜ್ಜೆಯನ್ನು ದೃಢವಾಗಿಟ್ಟರು. ಮೈಸೂರು ರಾಜ್ಯಾಂಗ ಸಭೆ ಸದಸ್ಯರಷ್ಟೇ ಅಲ್ಲದೇ ಅಲ್ಲಿನ ಮುಖ್ಯ ಸಚೇತಕರಾದರು. ರಾಜ್ಯಾಂಗ ಸಭೆಯಲ್ಲಿ ತಮ್ಮ ನಡೆ ನುಡಿಗಳಿಂದ ಎಲ್ಲರ ಮೆಚ್ಚುಗೆಗೆ ಒಳಗಾದರು.

1952ರಲ್ಲಿ ಭಾರತದ ಪ್ರಪ್ರಥಮ ಚುನಾವಣೆಯನ್ನು ಘೋಷಿಸಲಾಯಿತು. ಶ್ರೀ ಎಂ.ವಿ.ಕೆ. ಅವರು ಮೈಸೂರು ರಾಜ್ಯಾಂಗ ಸಭೆಯಲ್ಲಿ ಮುಖ್ಯ ಸಚೇತಕರಾಗಿ ಕಾರ್ಯ ನಿರ್ವಹಿಸುತ್ತಿದ್ದರೆಂಬುದು ರಾಜ್ಯದ ಜನತೆಗೆ ಅದರಲ್ಲೂ ಕೋಲಾರದ ಜನತೆಗೆ ಗೌರವವನ್ನೇ ತರುವ ರೀತಿಯಲ್ಲಿ ತಮ್ಮ ಜವಾಬ್ದಾರಿಯನ್ನು ನಿರ್ವಹಿಸಿದ್ದರು. ಇದು ಎಂ.ವಿ.ಕೆ. ರವರು ಮುಂದಿನ ಚುನಾವಣೆಗೆ ಸ್ಪರ್ಧಿಸಲು ಅನುಕೂಲ ಮಾಡಿಕೊಟ್ಟಿತು.

1952ರ ಮಹಾಚುನಾವಣೆಗೆ ಕೋಲಾರ 'ಲೋಕಸಭೆ'ಯಿಂದ ಸ್ಪರ್ಧಿಸಬೇಕು ಅದು ನಮ್ಮ ಗೌರವದ ಪ್ರಶ್ನೆ ಎಂದು ಜಿಲ್ಲೆಯ ಜನತೆ ಎಂ.ವಿ. ಕೃಷ್ಣಪ್ಪನವರಿಗೆ ಆಹ್ವಾನ ನೀಡಿದರು. ಶ್ರೀ ಎಂ.ವಿ.ಕೆ ರವರು ಜನತೆಯ ಕೋರಿಕೆಗೆ ಮನ್ನಣೆ ನೀಡಿ ಕೋಲಾರ ಲೋಕಸಭೆಗೆ 'ಕಾಂಗ್ರೆಸ್' ಅಭ್ಯರ್ಥಿಯಾಗಿ ಸ್ಪರ್ಧಿಸಿದರು. ಜನತೆ ಬಹುಮತ ನೀಡಿ ಲೋಕಸಭಾ ಸದಸ್ಯರನ್ನಾಗಿ ಎಂ.ವಿ.ಕೆ. ಅವರನ್ನು ಆಯ್ಕೆ ಮಾಡಿ ದೆಹಲಿಗೆ ಕಳಿಸಿತು.

1952ರಲ್ಲಿ ಲೋಕಸಭೆಗೆ ಪ್ರಪ್ರಥಮ ಬಾರಿಗೆ ಆಯ್ಕೆಯಾಗಿ ಎಂ.ವಿ.ಕೆ. ಅವರು ದೆಹಲಿಗೆ ಹೋದರು. ದೇಶದ ಪ್ರಧಾನಿಯಾಗಿ ಶ್ರೀ ಜವಾಹರಲಾಲ್ ನೆಹರು ದೇಶದಲ್ಲಿನ ಗ್ರಾಮಗಳ ಅಭಿವೃದ್ಧಿಯನ್ನು ಕುರಿತು ಚರ್ಚೆ ಏರ್ಪಡಿಸಿದರು. ಈ ಚರ್ಚೆಯಲ್ಲಿ ಮುತ್ಸದಿ ರಾಜಕಾರಣಿಗಳು ಹಿರಿಯ ಸ್ವಾತಂತ್ರ್ಯ ಹೋರಾಟಗಾರರೆನಿಸಿದ ಮಂತ್ರಿಗಳು ಸಣ್ಣ ಕೈಗಾರಿಕೆಗಳ ಪರವಾಗಿ ಮಾತನಾಡಿದರು. ಈ ಸಂದರ್ಭದಲ್ಲಿ ಎಂ.ವಿ.ಕೆ.ರವರು ಗ್ರಾಮಗಳ ಅಭಿವೃದ್ಧಿಯನ್ನು ಗ್ರಾಮೀಣ ಜನತೆಯ ಕಷ್ಟ ಕಾರ್ಪಣ್ಯಗಳು, ಬೇಸಾಯದ ಅವಶ್ಯಕತೆಯನ್ನು ರೈತರ ಬಗೆಗಿನ ಕಾಳಜಿಯನ್ನು ಮನಮುಟ್ಟುವಂತೆ ತಮ್ಮ ಏರು ಧ್ವನಿಯಲ್ಲಿ ನೆಹರು ಹಾಗೂ ಕಿದ್ವಾಯಿಯವರ ಬಳಿ ಚರ್ಚೆ ಮಾಡಿದರು. ಎಂ.ವಿ.ಕೆ.ರವರ ಚರ್ಚೆಗೆ ಎಲ್ಲರೂ ತಲೆದೂಗಿದರು. ಮರುದಿನ ನೆಹರು ಅವರಿಂದ ಎಂ.ವಿ.ಕೆ. ಅವರಿಗೆ ಕರೆ ಬಂತು.

ಪ್ರಧಾನಿ ನೆಹರು ಸಮೀಪಕ್ಕೆ ಎಂ.ವಿ.ಕೆ ಅವರು ಭಯಮಿಶ್ರಿತ ಗೌರವದಿಂದ ಹೋಗಿ ನಿಂತರು. ನೆಹರು ಅವರು ಕುಳಿತುಕೊಳ್ಳುವಂತೆ ಆಜ್ಞಾಪಿಸಿದರು. ಪ್ರಧಾನಿಯವರ ಮುಂದೆ ತಾವು ಕುಳಿತುಕೊಳ್ಳುವುದು ತರವಲ್ಲವೆಂದು ವಿನಯದಿಂದ ನಿಂತೇ ಇದ್ದರು. ಆಗ ನೆಹರು ಅವರು "ಅಲ್ಲಯ್ಯ ನೆನ್ನೆ ಚರ್ಚೆಯಲ್ಲಿ ಅಷ್ಟು ಜೋರಾಗಿ ಮಾತನಾಡಿದೆ. ಈಗ ಕುಳಿತುಕೊಳ್ಳಲು ಅಂಜುತ್ತಿರುವೆ,

ನೋಡುವುದಕ್ಕೆ ಒಳ್ಳೆ 'ಪೈಲ್ವಾನ್' ಇದ್ದ ಹಾಗಿರುವೆ" ಎಂದು ಛೇಡಿಸಿದರು. ನಿನ್ನ ನೇರವಾದ ಮಾತುಗಳು ನನಗೆ ಇಷ್ಟವಾಯಿತು. ಗ್ರಾಮೀಣ ಪ್ರದೇಶಗಳ ಬಗ್ಗೆ ಅಲ್ಲಿನ ರೈತರ ಬಗ್ಗೆ ನಿನ್ನ ಕಾಳಜಿ ಶ್ರೇಷ್ಠ ಮಟ್ಟದ್ದು. ನಿಮಗೆ ಕೃಷಿ ಹಾಗೂ ಆಹಾರ ಸಚಿವ ಸ್ಥಾನದಲ್ಲಿರುವ ಶ್ರೀ ಕಿದ್ವಾಯಿ ಜೊತೆಯಲ್ಲಿ ಉಪಸಚಿವ ಸ್ಥಾನ ಕಲ್ಪಿಸಲಾಗಿದೆ. 'ನಿಮ್ಮನ್ನು ಕ್ಯಾಬಿನೇಟ್ ಸಚಿವರನ್ನಾಗಿ ಮಾಡಬಹುದಾಗಿತ್ತು. ಆದರೆ ನಿಮ್ಮ ವಯಸ್ಸು ಸಣ್ಣದು" ಎಂದರು. ಈ ಮಾತನ್ನು ಕೇಳಿದಾಕ್ಷಣ ಎಂ.ವಿ.ಕೆ ರವರು ಹೇಳಲಸದಳವಾದ ಆಶ್ಚರ್ಯಮಿಶ್ರಿತ ಸಂತೋಷಕ್ಕೆ ಒಳಗಾದರು. ಕೃಷಿ ಹಾಗೂ ಆಹಾರ ಖಾತೆ ಉಪಸಚಿವ ಸ್ಥಾನವೆಂಬ 'ಅಮೃತ'ವನ್ನು ಎಂ.ವಿ. ಕೃಷ್ಣಪ್ಪನವರು 1952ರಲ್ಲಿ ಶ್ರದ್ಧಾಭಕ್ತಿಯಿಂದ ಸ್ವೀಕರಿಸಿದರು.

ಎಂ.ವಿ. ಕೃಷ್ಣಪ್ಪನವರು ಕೃಷಿ ಹಾಗೂ ಆಹಾರ ಸಚಿವ ಸ್ಥಾನ ಸ್ವೀಕರಿಸಿದಾಗ ಅವರ ವಯಸ್ಸು ಕೇವಲ 33 ವರ್ಷಗಳು. ಕೇಂದ್ರ ಮಂತ್ರಿಮಂಡಲದಲ್ಲಿದ್ದ ಎಲ್ಲ ಸಚಿವರಿಗಿಂತ ಎಂ.ವಿ. ಕೃಷ್ಣಪ್ಪನವರು ಅತ್ಯಂತ ಕಿರಿಯ ಸಚಿವರಾಗಿದ್ದರು.

ಕರ್ನಾಟಕ ರಾಜ್ಯದವರೂ, ಕೋಲಾರ ಜಿಲ್ಲೆಯವರೂ ಆದ ಎಂ.ವಿ. ಕೃಷ್ಣಪ್ಪನವರು ಸ್ವಾತಂತ್ರ್ಯ ಪಡೆದಾದನಂತರ ನಡೆದ ಮಹಾಚುನಾವಣೆಯಲ್ಲಿ ಗೆದ್ದು ಮೊಟ್ಟ ಮೊದಲ ಬಾರಿಗೆ ಕೇಂದ್ರದಲ್ಲಿ ಸಚಿವ ಸ್ಥಾನ ಪಡೆದಿದ್ದು ಹುಟ್ಟೂರಾದ ಮೋತಕಪಳ್ಳಿಯಿಂದ ಹಿಡಿದು ನಾಡಿನ ಜನತೆಯವರೆಗೆ ಎಲ್ಲರೂ ಸಂತೋಷವನ್ನು ಹಂಚಿಕೊಂಡರು. ಕೋಲಾರ ಜಿಲ್ಲೆ ಹಾಗೂ ಕರ್ನಾಟಕದ ದಿನಪತ್ರಿಕೆಗಳು ಎಂ.ವಿ.ಕೆ ಅವರು ಕೇಂದ್ರ ಸಚಿವರಾದಾಗ "Master ಯಿಂದ Minister" ಎಂದು ಹೊಗಳಿತು. ಏಕೆಂದರೆ ವಿದ್ಯಾಭ್ಯಾಸದ ನಂತರ ಕೆಲವು ತಿಂಗಳು ಕೆ.ಜಿ.ಎಫ್.ನ ಶಾಲೆಯಲ್ಲಿ ಉಪಾಧ್ಯಾಯರಾಗಿ ಸೇವೆ ಸಲ್ಲಿಸಿದ್ದರು.

ತಾವು ಮಂತ್ರಿಯಾಗಿದ್ದೇನೆಂದು ಯಾವತ್ತೂ ಗರ್ವದಿಂದ ನಡೆದುಕೊಂಡಿಲ್ಲ. ತಮ್ಮ ಶ್ರೀಮತಿಯಾದ 'ಪ್ರಮೀಳಾ'ರವರಿಗೆ ಪತ್ರ ಬರೆದು ಬುದ್ಧಿವಾದವನ್ನು ಹೇಳುತ್ತಿದ್ದ ಪತ್ರಗಳು ಸಾಕ್ಷಿಯಾಗಿ ನಿಂತು ಅವರ ಸರಳತವನ್ನು ಪ್ರದರ್ಶಿಸುತ್ತದೆ. ಶ್ರೀಮತಿ ಪ್ರಮೀಳಾ ಕೃಷ್ಣಪ್ಪನವರು ಹೇಳುವಂತೆ "ಎಂ.ವಿ.ಕೆ ಅವರು ತಮಗೆ ಬರೆಯುವ ಪ್ರತಿಯೊಂದು ಪತ್ರದಲ್ಲೂ ಸರಳ ಜೀವನದ ಬಗ್ಗೆ ಭೋದನೆ ಮಾಡುತ್ತಿದ್ದರು. ಗಾಂಧೀಜಿರವರ ಜೀವನ ಚರಿತ್ರೆಯನ್ನು ಓದುವಂತೆ ಸಲಹೆ ನೀಡುತ್ತಿದ್ದರು. ಮತ್ತೊಬ್ಬರ ಬದುಕಿಗೆ ಸಹಾಯ ಮಾಡುವಂತೆ ಪದೇ ಪದೇ ಹೇಳುತ್ತಿದ್ದರು. ಹಸುಗಳ, ಕೋಳಿಗಳ ಬಗ್ಗೆ ಪ್ರಸ್ತಾಪ ಮಾಡಿ ಅವುಗಳನ್ನು ಗಮನಿಸಬೇಕೆಂದು ಕೋರುತ್ತಿದ್ದರು". ಇವೆಲ್ಲಾ ಮಾತಿನ ಪತ್ರಗಳು ಎಂ.ವಿ.ಕೆ ರವರು ಮಂತ್ರಿಯಾಗಿದ್ದಾಗ ವಿದೇಶಿ ಪ್ರಯಾಣದಲ್ಲಿದ್ದಾಗ ಬರೆದಿದ್ದು. ಪಶುಗಳ ಬಗ್ಗೆ, ಗಾಂಧೀಜಿಯ ಸರಳತನದ ಬಗ್ಗೆ ಅವರ ಆಸಕ್ತಿ ಹೊಗಳುವಂತದ್ದು.

ಎಂ.ವಿ. ಕೃಷ್ಣಪ್ಪನವರು ಮಂತ್ರಿಗಳಾಗಿದ್ದಾಗ ಅನೇಕ ರಾಷ್ಟ್ರಗಳಿಗೆ ಭೇಟಿ ನೀಡಿ ಅಲ್ಲಿನ ರೈತರ ಬದುಕನ್ನು ಅಧ್ಯಯನ ಮಾಡಿದರು. ಡೆನ್ಮಾರ್ಕ್, ಹಾಲೆಂಡ್, ಜರ್ಮನಿ ದೇಶದ ರೈತರ ಬದುಕು

ಅತ್ಯಂತ ಶ್ರೀಮಂತವಾಗಿತ್ತು. ಆ ದೇಶಗಳ ರೈತರ ಬದುಕಿನೊಂದಿಗೆ ಭಾರತೀಯ ರೈತರ ಬದುಕನ್ನು ಹೋಲಿಸಿ ನೋಡಿದಾಗ ಶ್ರೀ ಎಂ.ವಿ.ಕೆ ಅವರಿಗೆ ನಮ್ಮ ರೈತರ ಬದುಕು ತುಂಬಾ ಶೋಚನೀಯವಾಗಿ ಕಂಡಿತು.

ಡೆನ್ಮಾರ್ಕ್, ಹಾಲೆಂಡ್, ಸ್ವೀಡನ್, ಜರ್ಮನಿ ದೇಶಗಳಿಗೆ ಹೋದಾಗ ಅಲ್ಲಿನ ಶ್ರೀಮಂತ ರೈತರ ಬದುಕಿನ ಶೈಲಿಯನ್ನು ಕಂಡರು. ಅಂತಹದೇ ಬದುಕು ಭಾರತೀಯ ರೈತರ ಬದುಕಾಗಬೇಕೆಂದು ಯೋಜನೆಗಳನ್ನು ರೂಪಿಸಿಕೊಂಡು ಬಂದರು. ನಮ್ಮ ದೇಶದಲ್ಲಿ ಬೆಳೆಯುತ್ತಿರುವ ಜನಸಂಖ್ಯೆ, ಬಡತನ, ನಿರುದ್ಯೋಗ, ರೈತಾಪಿ ಜನರ ಬಂಜರು ಬದುಕು ಇವೇ ಮುಂತಾದ ಸಮಸ್ಯೆಗಳು ಎಂ.ವಿ.ಕೆ ಅವರ ಮನಸ್ಸನ್ನು ಕೆದಕಿದವು.

ಸಚಿವರಾದ ಎಂ.ವಿ. ಕೃಷ್ಣಪ್ಪನವರು ಹಾಲೆಂಡ್ ದೇಶದಲ್ಲಿನ ಒಬ್ಬ ರೈತನ ಬದುಕನ್ನು ತಾವು ಕಂಡ ರೀತಿಯಲ್ಲಿ ವಿವರಿಸುತ್ತಾರೆ "ಜಾನ್‌ಸನ್ ಎಂಬ ರೈತ ನ್ನ ಬೇಸಾಯ. ಬದುಕಿನಿಂದ ಎಷ್ಟೊಂದು ಸುಖವಾಗಿದ್ದಾನೆಂದರೆ ಆತನ ಮನೆ ಎರಡು ಅಂತಸ್ತಿನದು. ಮನೆಯಲ್ಲಿ ಎರಡು ಫೋನುಗಳು, ರೇಡಿಯೋ, ಸುಸಜ್ಜಿತವಾದ ಆರಾಮ ಕುರ್ಚಿಗಳು, ಒಳ್ಳೆಯ ಮನೆ. ನಮ್ಮ ದೇಶದ ಮಂತ್ರಿಗಳ ಮನೆಗಳಿಗಿಂತ ಚೆಂದವಾದ ಮನೆ ಆತನದು. ಜಾನ್‌ಸನ್ ಸ್ವಂತವಾಗಿ ಎರಡು ಕಾರುಗಳನ್ನು, ಟ್ರಕ್‌ನ್ನು ಸಹ ಇಟ್ಟುಕೊಂಡಿದ್ದಾನೆ. ಆತನ ಬೇಸಾಯದ ಭೂಮಿ ಕೇವಲ 12 ಎಕರೆ. ಅದರಲ್ಲಿ 6 ಎಕರೆಗಳನ್ನು ದನಗಳಿಗೆ ಮೇವು ಬೆಳಸುತ್ತಿದ್ದ. ತಾನು 10 ಹಸುಗಳನ್ನು ಸಾಕುತ್ತಿದ್ದ. ಒಂದೊಂದು ಹಸು ಇಪ್ಪತ್ತಕ್ಕಿಂತ ಹೆಚ್ಚು ಲೀಟರ್ ಹಾಲನ್ನು ಕೊಡುತ್ತಿದ್ದವು. ಆ ಹಸುಗಳೆಲ್ಲಾ ಹೆಚ್.ಎಫ್. ಜಾತಿಯವು ಜಾನ್‌ಸನ್ ಮಾತ್ರವೇ ಅಲ್ಲಾ ಹಾಲೆಂಡ್ ದೇಶದ ಪ್ರತಿಯೊಬ್ಬ ರೈತ ಸಹ ಇಂತಹ ಹಸುಗಳನ್ನು ಸಾಕಿ ಶ್ರೀಮಂತನಾಗುತ್ತಿದ್ದ. ಆ ಹಸುಗಳೆಲ್ಲಾ ನಿಜವಾಗಿಯೂ ಕಾಮಧೇನುಗಳು. ಆದರೆ 'ಗೋ ಪೂಜೆ' ಮಾಡುವ ನಾವು ಅವುಗಳಿಗೆ ಆಹಾರ ನೀಡುವುದಿಲ್ಲ. ಅವೂ ಸಹ ಹಾಲು ನೀಡುವುದಿಲ್ಲ. ಅರ್ಧ ಲೀಟರ್ ಹಾಲು ನೀಡಿದರೆ ಅದನ್ನೂ ಮಾರಿ ಬೀಡಿ, ಎಲೆ ಅಡಿಕೆ ಕೊಂಡುಕೊಳ್ಳುವ ಜನ ನಮ್ಮವರು. ಆ ದೇಶದಲ್ಲಿ 'ಸಹಾಕಾರ ಸಂಘ'ಗಳು ಕ್ರಿಯಾತ್ಮಕವಾಗಿ ಕಾರ್ಯ ನಿರ್ವಹಿಸುತ್ತವೆ.

ಹಾಲೆಂಡ್‌ನ ಜಾನ್‌ಸನ್ ಪಶುಪಾಲನೆ ಜೊತೆ ಮೀನು ಸಾಕಾಣಿಕೆ, ಕೋಳಿ ಸಾಕಾಣಿಕೆ ಮೂಲಕ ತನ್ನ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಂಡಿದ್ದಾನೆ". ಈ ರೀತಿ ಜಾನ್‌ಸನ್‌ನ ಬದುಕಿನಂತೆ ನಮ್ಮ ದೇಶದ ರೈತ ಆಗಬೇಕೆಂದು ಮನಸ್ಸು ಮಾಡಿ ಎಂ.ವಿ.ಕೆ.ರವರು ಭಾರತಕ್ಕೆ ಹಿಂದಿರುಗಿದರು.

ಭಾರತ ದೇಶಕ್ಕೆ ಹಿಂದಿರುಗಿ ಬರುವಾಗ ವಿಮಾನದಲ್ಲಿ ಡೆನ್ಮಾರ್ಕ್‌ನ ಹೆಚ್.ಎಫ್. ಹಸುಗಳನ್ನು ಕರೆತಂದು ದೇಶದ ಜನರಿಗೆ 'ಅತಿಥಿ'ಗಳನ್ನು ಕರೆತಂದಿದ್ದೀನಿ ಚೆನ್ನಾಗಿ ನೋಡಿಕೊಳ್ಳಿ ಎಂದರಂತೆ. ಎಂ.ವಿ.ಕೆ. ಅವರ ಮಾತಿನಂತೆ ನಮ್ಮ ದೇಶದ ರೈತರು ಹೆಚ್.ಎಫ್. ಜಾತಿಯ ಹಸು (ಸೀಮೆ ಹಸು) ಗಳನ್ನು ಚೆನ್ನಾಗಿ ಪೋಷಿಸಿ ಬೆಳೆಸಿದರು. ಈ ಸೀಮೆ ಹಸುಗಳು ಇಪ್ಪತ್ತರಿಂದ ಮೂವತ್ತು ಲೀಟರ್ ಹಾಲನ್ನು ನೀಡಲಾರಂಭಿಸಿದವು. ದೇಶದಲ್ಲಿ ಈಗ ದಿನವೊಂದಕ್ಕೆ ಹಾಲಿನ ವಹಿವಾಟು ಕೋಟ್ಯಾಂತರ ರೂಪಾಯಿಗಳಷ್ಟು – ಇದು ಎಂ.ವಿ.ಕೆ. ಅವರ ಬುದ್ಧಿಶಕ್ತಿಯ ಫಲ.

ಎಂ.ವಿ.ಕೆ. ಅವರು ಹೆಚ್.ಎಫ್. ಹಸುಗಳನ್ನು ವಿಮಾನದಲ್ಲಿ ತೆಗೆದುಕೊಂಡು ಬರುವಾಗ ಒಂದು ಹೆಚ್.ಎಫ್. ಗೂಳಿಯನ್ನೂ ಸಹ ಕರೆತಂದರು. ಹೆಚ್.ಎಫ್. ಗೂಳಿ ನಮ್ಮ ದೇಶದಲ್ಲಿ ನಾಟಿ ಹಸುಗಳನ್ನು ಕೂಡಿದರೆ (ಕ್ರಾಸ್) ಮುಂದೆ 'ಮಿಶ್ರತಳಿ' 'ಫಲವಾಗಬಹುದೆಂಬುದು' ಎಂ.ವಿ.ಕೆ. ಅವರ ಮುಂದಾಲೋಚನೆ. ಇದು ಯಶಸ್ವಿ ಸಹಾ ಆಯ್ತು. ಎಂ.ವಿ.ಕೆ. ಅವರ 'ಕಾಮಧೇನು'ವಿನ ಕೊಡುಗೆಯನ್ನು ಈ ದೇಶದಲ್ಲಿ ಸ್ಮರಿಸದ ಗೋಪಾಲಕರೇ ಇಲ್ಲವೆನ್ನಬಹುದು.

ಜಪಾನ್ ದೇಶಕ್ಕೆ ಭೇಟಿ ಮಾಡಿ ಬಂದ ಎಂ.ವಿ.ಕೆ ಅವರು ಅಲ್ಲಿನವರ ಬೇಸಾಯದ ಪದ್ಧತಿಗೆ ಮನಸೋತರು. ಅಲ್ಲಿನ ಬೇಸಾಯದ ಪದ್ಧತಿಯನ್ನು ನಮ್ಮ ದೇಶದಲ್ಲಿನ ಬೇಸಾಯಕ್ಕೆ ಅಳವಡಿಸಿ ಪ್ರಯೋಗಿಸಿದಾಗ ಯಶಸ್ವಿ ಆಯ್ತು. ಮುಂದೆ ಎಕರೆ ಭೂಮಿಯಲ್ಲಿ 50 ರಿಂದ 60 ಮೂಟೆ ಭತ್ತವನ್ನು ನಮ್ಮ ದೇಶದ ರೈತ ಬೆಳೆಯಲಾರಂಭಿಸಿದ.

ಪ್ರಧಾನ ಮಂತ್ರಿ ಜವಾಹರಲಾಲ್ ನೆಹರೂ ಅವರು ಎಂ.ವಿ. ಕೃಷ್ಣಪ್ಪನವರ ಬೇಸಾಯದ ಬಗೆಗಿನ ಆಸಕ್ತಿಯನ್ನು ಕಂಡು 1953ರಲ್ಲಿ 'Agricultural Prices Enquiry Committee Chairmanರನ್ನಾಗಿ ನೇಮಿಸಿದರು.

ಜಪಾನ್ ಹಾಗೂ ನಾರ್ವೆ ದೇಶಗಳನ್ನು ಸಂದರ್ಶಿಸಿ ಬಂದಾದನಂತರ, ನಮ್ಮ ದೇಶದಲ್ಲೂ 'ಮೀನು ಸಾಕಾಣಿಕೆ ಹಾಗೂ ಕೋಳಿ ಸಾಕಾಣಿಕೆ'ಯ ಮಾದರಿಯನ್ನು ಆರಂಭಿಸಿದರು. ಈಗ ದೇಶದಲ್ಲಿ ಲೆಕ್ಕವಿಲ್ಲದಷ್ಟು ಸಾಕಾಣಿಕೆ ಕೇಂದ್ರಗಳು ಇವೆ. ಇವುಗಳಿಂದ ಲಕ್ಷಾಂತರ ಜನ ಸುಖ ಜೀವನ ನಡೆಸುತ್ತಿದ್ದಾರೆ. ಇದೆಲ್ಲಾ ಎಂ.ವಿ.ಕೆ ಅವರ ಶ್ರಮ ಸಾಧನೆ.

ಎಂ.ವಿ. ಕೃಷ್ಣಪ್ಪನವರು ಪ್ರಮೀಳಾರವರನ್ನು ವಿವಾಹ ಆದದ್ದು ಸರಳವಾಗಿ. ದಂಪತಿಗಳಿಗೆ 6 ಜನ ಮಕ್ಕಳು. ಇಬ್ಬರು ಗಂಡು ಮಕ್ಕಳ ಹೆಸರು ಯಾವುದೆಂದರೆ ಹಿರಿಯ ಮಗ ಅಶೋಕ ಕಿರಿಯ ಮಗ ಜಯಸಿಂಹ. ತಮ್ಮ ತಂದೆ ಈ ರೀತಿಯ ಹೆಸರುಗಳನ್ನು ಇಡಲು ಕಾರಣ ಸಹ ಮಕ್ಕಳು ಹೇಳುವರು – "ಧರ್ಮ, ಸತ್ಯ, ದಯಾ, ಕೃಪೆ – ಇವು ಅಶೋಕ ಚಕ್ರವರ್ತಿಯ ಗುಣಗಳು. ಈ ಕಾರಣಗಳಿಂದ ಹೆಣ್ಣು ಮಕ್ಕಳ ಹೆಸರುಗಳನ್ನು ಅಶೋಕ ಚಕ್ರವರ್ತಿಯ ಗುಣಗಳಾಗಿ ಇಟ್ಟರು. ಅಶೋಕ ಚಕ್ರವರ್ತಿಯ ತಮ್ಮ ಜಯಸಿಂಹ. ಅಶೋಕ ಚಕ್ರವತಿರ್ಯ ಎಲ್ಲಾ ಯುದ್ಧಗಳಿಗೂ ಜಯ ಕೊಡಿಸಲು ಅವರ ತಮ್ಮನಾದ ಜಯಸಿಂಹ ಹೋರಾಡುತ್ತಿದ್ದನಂತೆ. ಈ ಕಾರಣಕ್ಕಾಗಿ ಕಿರಿಯ ಮಗನ ಹೆಸರು ಜಯಸಿಂಹ ಎಂದು ಇಟ್ಟರು. ಪ್ರಸ್ತುತ ಮಕ್ಕಳಾದ ಅಶೋಕ ಕೃಷ್ಣಪ್ಪ ಹಾಗೂ ಜಯಸಿಂಹ ಕೃಷ್ಣಪ್ಪ ತಮ್ಮ ತಂದೆಯ ಹಾದಿಯಲ್ಲಿ ನಡೆದು ರಾಜಕೀಯವಾಗಿ ಬೆಳೆಯುತ್ತಿದ್ದಾರೆ.

ಎಂ.ವಿ. ಕೃಷ್ಣಪ್ಪನವರು ಕೇಂದ್ರ ಸರ್ಕಾರದ ಸಚಿವರಾಗಿದ್ದಾಗ ಕರ್ನಾಟಕಕ್ಕೆ ಸೇರಿದಂತೆ ದೇಶದ ಎಲ್ಲಾ ರಾಜ್ಯಗಳಿಗೂ ಪ್ರಾಧಾನ್ಯತೆ ನೀಡಿದವರು ಎಲ್ಲಾ ರಾಜ್ಯದ ಅಭಿವೃದ್ದಿಯ ಕಡೆಗೆ ಗಮನ ಹರಿಸಿದವರು ಎಂ.ವಿ.ಕೆ. ಅವರು. ಕಾಶ್ಮೀರದಲ್ಲಿನ ಆಹಾರದ ಸಮಸ್ಯೆಯನ್ನು ನೀಗಿಸಿದರು. ಪಂಜಾಬ್‌ನಲ್ಲಿ ಗೋಧಿ ಬೆಳೆ ಬೆಳೆಯಲು ಹಲವಾರು ಯೋಜನೆಗಳನ್ನು ರೂಪಿಸಿಕೊಟ್ಟರು ಉತ್ತರ

ಪ್ರದೇಶದಲ್ಲಿ ಹಾಲಿನ ಡೈರಿಗಳನ್ನು ಸ್ಥಾಪಿಸಿದರು. ರಾಜಸ್ತಾನ ಗುಜರಾತ್ ಹಾಗೂ ಕರ್ನಾಟಕ ರಾಜ್ಯಗಳಲ್ಲಿ ಸಕ್ಕರೆ ಕಾರ್ಖಾನೆಗಳ ಸ್ಥಾಪನೆಗೆ ಕಾರಣಕರ್ತರಾದರು. ಮಹಾರಾಷ್ಟ್ರದಲ್ಲಿ, ಕರ್ನಾಟಕದಲ್ಲಿ ಹಾಗೂ ಇತರೇ ರಾಜ್ಯಗಳಲ್ಲಿ ಸಕ್ಕರೆ ಕಾರ್ಖಾನೆಗಳನ್ನು ಸ್ಥಾಪಿಸಿದರು. ಸಣ್ಣ ನೀರಾವರಿ ಸಚಿವರಾಗಿ ರೈತರಿಗೆ ಅನೇಕ ರೀತಿಯ ಸಹಾಯಗಳನ್ನು ಮಾಡಿದರು. ಕೆ.ಜಿ.ಎಫ್.ನ ಗಣಿ ಕಾರ್ಮಿಕರಿಗೆ ಸಹಾಯ ಹಸ್ತ, ಕೆ.ಜಿ.ಎಫ್.ನಲ್ಲಿ ಬಿ.ಇ.ಎಂ.ಎಲ್. ಸ್ಥಾಪನೆ, ಪ್ರಥಮ ದರ್ಜೆ ಕಾಲೇಜು ಸ್ಥಾಪನೆ ಇವೇ ಮುಂತಾದ ಸೇವೆಗಳಾಗಿವೆ. ದೇಶದಲ್ಲಿ ಮೀನುಸಾಕಾಣಿಕಾ ಕೇಂದ್ರಗಳು, ಕೋಳಿ ಸಾಕಾಣಿಕಾ ಕೇಂದ್ರಗಳು, ಪಶುಸಾಕಾಣಿಕ ಕೇಂದ್ರಗಳನ್ನು ಸ್ಥಾಪಿಸಿದರು. ದೇಶದಲ್ಲಿ ಡೈರಿಗಳನ್ನು ಸ್ಥಾಪಿಸಿದರು. ಸಹಕಾರಿ ಕ್ಷೇತ್ರಗಳಿಗೆ ಸಾಕಷ್ಟು ಸಹಕಾರ ನೀಡಿದರು. ದೇಶಾದ್ಯಂತ ಅನೇಕ ಆಹಾರ ಉಗ್ರಾಣ ಕೇಂದ್ರಗಳನ್ನು ಕಟ್ಟಿಸಿಕೊಟ್ಟರು. ಇವೇ ಮುಂತಾದ ಸಾಧನೆಗಳು ದೇಶಕ್ಕೆ ಶ್ರೀಯುತರಿಂದ ಲಭಿಸಿದೆ.

ಆನಂತರ 1962ರಲ್ಲಿ ತುಮಕೂರು ಲೋಕಸಭೆಯಿಂದ ಆಯ್ಕೆಯಾದರು. ಆದರೆ ಆ ಸಮಯದಲ್ಲಿ ಕೇಂದ್ರ ಸಚಿವರಾಗಿದ್ದ A.P. ಜೈನ್‌ರವರು ಲೋಕಸಭೆ ಚುನಾವಣೆಯಲ್ಲಿ ಸ್ಪರ್ಧಿಸಬೇಕಾಗಿತ್ತು. ಪ್ರಧಾನಿಗಳು ಎಂ.ವಿ. ಕೃಷ್ಣಪ್ಪರವರನ್ನು ಕರೆಸಿ ತುಮಕೂರಿನಿಂದ ತಾವು ಸ್ಥಾನ ಬಿಟ್ಟುಕೊಟ್ಟು ಜೈನ್‌ರವರನ್ನು ನಿಲ್ಲಿಸಿ–ಗೆಲ್ಲಿಸಿ ಕಳಹಿಸಿಕೊಡಿ ಎಂದು ಮನವಿ ಮಾಡಿದರು.

ಎಂ.ವಿ.ಕೆ ಅವರು ತುಮಕೂರು ಲೋಕಸಭೆಗೆ ಪ್ರಧಾನಿ ಅವರ ಮನವಿ ಮೇರೆಗೆ ರಾಜೀನಾಮೆ ನೀಡಿ ಎ.ಪಿ. ಜೈನ್ ಅವರನ್ನು ಉತ್ತರ ಭಾರತದಿಂದ ಕರೆತಂದು ಗೆಲ್ಲಿಸಿ ಕಳಿಸಿದ್ದು ಅವರ ರಾಜಕೀಯ ನೈಪುಣ್ಯತೆ, ಮುತ್ಸದ್ಧಿತನವನ್ನು ತೋರಿಸುತ್ತದೆ.

ನೆಹರೂ ಅವರು ಕೋರಿಕೆ ಮೇರೆಗೆ ತುಮಕೂರು ಲೋಕಸಭೆಗೆ ರಾಜೀನಾಮೆ ನೀಡಿದ್ದರಿಂದ ಎಂ.ವಿ. ಕೃಷ್ಣಪ್ಪನವರನ್ನು ನೆಹರೂ ಅವರು ಇಷ್ಟಪಟ್ಟರು. ಕರ್ನಾಟಕದಲ್ಲಿ ಎಂ.ವಿ.ಕೆ. ಅವರನ್ನು ವಿಧನಪರಿಷತ್ ಸದಸ್ಯರನ್ನಾಗಿ ಆಯ್ಕೆ ಮಾಡಬೇಕೆಂದು ರಾಜ್ಯ ರಾಜಕಾರಣಿಗಳಿಗೆ ನೆಹರೂರವರು ಸೂಚಿಸಿದರು. ಹಾಗೆಯೇ ಎಂ.ವಿ.ಕೆ. ವಿಧಾನ ಪರಿಷತ್ ಸದಸ್ಯರಾಗಿ 1961ರಲ್ಲಿ ರಾಜ್ಯ ರಾಜಕಾರಣಕ್ಕೆ ಪಾದಾರ್ಪಣೆ ಮಾಡಿದರು. ಎಂ.ವಿ.ಕೆ. ಅವರ ಮುಂದೆ ತಮ್ಮ ಬುದ್ಧಿಶಕ್ತಿಯಿಂದ ಶಾಸಕರನ್ನು ತಮ್ಮ ಎಡೆಗೆ ಸೆಳೆದುಕೊಳ್ಳುವರು. ಆನಂತರ ಪ್ರಧಾನಿ ನೆಹರೂ ಅವರು ಎಂ.ವಿ.ಕೆ. ಅವರನ್ನು ದೆಹಲಿಗೆ ಕರೆಸಿಕೊಂಡು 'ವಿಧಾನಪರಿಷತ್ ಸದಸ್ಯ' ಶಾಸನ ಸಭೆಯ ನಾಯಕನಾಗುವುದು ಸಂಪ್ರದಾಯವಲ್ಲ. ತಾವು ಅದಕ್ಕ ರಾಜೀನಾಮೆ ನೀಡಿ ಶ್ರೀಯುತ ಎಸ್. ನಿಜಲಿಂಗಪ್ಪನವರನ್ನು ಶಾಸನ ಸಭಾನಾಯಕರನ್ನಾಗಿ ಮಾಡಿ ಸಹಕರಿಸಿ ಎಂದು ಸೂಚಿಸಿದರು. ಅದರಂತೆ ಎಂ.ವಿ.ಕೆ. ಶ್ರೀಯುತ ಎಸ್. ನಿಜಲಿಂಗಪ್ಪನವರನ್ನು ಶಾಸನಸಭಾನಾಯಕರನ್ನಾಗಿ ಮಾಡಿ ಮುಖ್ಯಮಂತ್ರಿಯನ್ನಾಗಿ ಮಾಡಲು ಸಹಕರಿಸುತ್ತಾರೆ. ಮುಖ್ಯಮಂತ್ರಿ ಎಸ್. ನಿಜಲಿಂಗಪ್ಪನವರ ಮಂತ್ರಿ ಮಂಡಳಿಯಲ್ಲಿ ಎಂ.ವಿ.ಕೆ. ಕ್ಯಾಬಿನೆಟ್ ಸಚಿವರಾಗಿ ಅಧಿಕಾರ ವಹಿಸಿಕೊಳ್ಳುವರು.

ಆರಂಭದಲ್ಲಿ ಎಂ.ವಿ. ಕೃಷ್ಣಪ್ಪನವರು ಗೌರವವಾಗಿ ರೆವೆನ್ಯೂ, ಆಹಾರ, ಕೃಷಿ, ಪಶುಸಂಗೋಪನ, ಅಬ್ಕಾರಿ, ಮುಜರಾಯಿ ಖಾತೆಗಳಿಗೆ ಮಂತ್ರಿಯಾಗುವರು. ಅನಂತರ ಕಂದಾಯ ಹಾಗೂ ಪಶುಸಂಗೋಪನಾ ಸಚಿವರಾಗಿ ಸೇವೆ ಮಾಡುವರು.

ಎಂ.ವಿ. ಕೃಷ್ಣಪ್ಪ ಅವರು ರಾಜ್ಯದಲ್ಲಿ ಕ್ಯಾಬಿನೆಟ್ ಸಚಿವರಾದ ನಂತರ ಹಲವಾರು ಯಶಸ್ವಿ ಕಾರ್ಯಗಳನ್ನು ಮಾಡಿ ಭೇಷ್ ಎನಿಸಿಕೊಂಡರು. ಕಂದಾಯದಲ್ಲಿ ಹಲವಾರು ಬದಲಾವಣೆಗಳನ್ನು ತಂದರು. ಕೃಷಿಗೆ ಸಂಬಂಧಿಸಿದಂತೆ ರಾಜ್ಯ ರೈತರಿಗೆ ಪೂರಕವಾದ ಕೆಲಸಗಳನ್ನು ಮಾಡಿದರು. ಅಂದಿನ ಪ್ರಧಾನ ಮಂತ್ರಿಯವರಾದ ಲಾಲ್ ಬಹುದ್ದೂರ್ ಶಾಸ್ತ್ರಿರವರನ್ನು ಕರೆಸಿ ಬೆಂಗಳೂರಿನ ಡೈರಿಯನ್ನು ಉದ್ಘಾಟನೆ ಮಾಡಿಸಿದರು. ಹಾಗೆಯೇ ಬೆಂಗಳೂರಿನಲ್ಲಿ ಅಖಿಲ ಭಾರತ ಜಾನುವಾರು ಮತ್ತು ಕುಕ್ಕುಟ ಪ್ರದರ್ಶನವನ್ನು ಅದ್ದೂರಿಯಾಗಿ ಏರ್ಪಡಿಸಿದ್ದರು. ಇವುಗಳೆಲ್ಲವನ್ನು ಪ್ರಧಾನ ಮಂತ್ರಿಗಳು ಉದ್ಘಾಟನೆ ಮಾಡಿದರು.

ಎಂ.ವಿ.ಕೆ. ಅವರು ಬೆಂಗಳೂರಿನ 'ಧರ್ಮಾಂಬುಧಿ ಕೆರೆ'ಯಲ್ಲಿ (ಈಗಿನ ಮೆಜೆಸ್ಟಿಕ್) ಭಾರತದ ಅತಿದೊಡ್ಡ ಜಾನುವಾರುಗಳ ಪ್ರದರ್ಶನ ಮಾಡಿದರು. ದೇಶಾದ್ಯಂತ ಪ್ರಚಾರವಾಗಿ ಎಲ್ಲೆಡೆಯಿಂದ ಜನಸಮೂಹ ಗೋಸಮೂಹಗಳು ಬಂದು ಸೇರಿತು. ಹಲವಾರು ಜಾತಿಯ ಗೋವುಗಳು ಪ್ರದರ್ಶನಕ್ಕೆ ಬಂದಿದ್ದವು. ಬೆಂಗಳೂರಿನಲ್ಲಿ ಕಂಡರಿಯದಷ್ಟು ದೊಡ್ಡ ಹಬ್ಬವಾಗಿ ವಿಜೃಂಭಿಸಿತು. ಪ್ರಧಾನ ಮಂತ್ರಿ ಶ್ರೀ ಲಾಲ್ ಬಹದ್ದೂರ್ ಶಾಸ್ತ್ರಿ ಅವರು ಇಂತಹ ಸಂಭ್ರಮದ ಕ್ಷಣಗಳು ಹಿಂದೆ ಕಂಡಿಲ್ಲ ಮುಂದೆ ಕಾಣುವುದಿಲ್ಲವೇನೋ ತುಂಬಾ ಅದ್ದೂರಿಯಾದದ್ದು ಎಂದು ಹೊಗಳಿದರು. ಇಂತಹ ಸಾಧನೆ ಮಾಡಿಸಿದವರು ಶ್ರೀ ಎಂ.ವಿ. ಕೃಷ್ಣಪ್ಪ.

1952ರಿಂದ ಸತತವಾಗಿ 1980ರವರೆಗೆ ಸತತವಾಗಿ ಹೊಸಕೋಟೆ, ಕೋಲಾರ, ತುಮಕೂರು ಕ್ಷೇತ್ರಗಳಿಂದ ಐದು ಬಾರಿ 'ಲೋಕಸಭೆ'ಗೆ ಆಯ್ಕೆಯಾಗಿದ್ದರು. 1970ರಲ್ಲಿ ಎಂ.ವಿ. ಕೆ. ಅವರನ್ನು ಕೇಂದ್ರ ಸರ್ಕಾರ "All Inida Shipping Board" Chairmanರನ್ನಾಗಿ ನೇಮಿಸಿತು. ಸ್ವಲ್ಪ ತಿಂಗಳು ಕಾಲ ಅಲ್ಲಿದ್ದ ಎಂ.ವಿ.ಕೆ. ಅವರು ಅಲ್ಲಿನ ಭ್ರಷ್ಟತೆಯನ್ನು ಕಂಡು ರಾಜೀನಾಮೆ ನೀಡಿ ಬಂದರು.

ಎಂ.ವಿ.ಕೆ. ಅವರು ಶ್ರೀಮತಿ ಇಂದಿರಾಗಾಂಧಿಯವರಿಗೆ ತಮ್ಮ ಮನೆಯನ್ನು ಪಾರ್ಟಿ ಕಛೇರಿಯನ್ನಾಗಿ ಏರ್ಪಡಿಸಿಕೊಟ್ಟರು. ಶ್ರೀಮತಿ ಇಂದಿರಾಗಾಂಧಿ ತಮ್ಮ ಅಧಿಕಾರವನ್ನು ಕಳೆದುಕೊಂಡಾಗ ಶ್ರೀ ಎಂ.ವಿ.ಕೆ. ಅವರು ಇಂದಿರಾಗಾಂಧಿಯವರಿಗೆ ಸ್ಥೈರ್ಯ ನೀಡಿದವರು. ದೆಹಲಿಯಲ್ಲಿನ ತಮ್ಮ ಮನೆ (15, Winder Place)ಯನ್ನು ಸಂಪೂರ್ಣವಾಗಿ ಕಾಂಗ್ರೆಸ್ ಕಛೇರಿಯನ್ನಾಗಿ ಬಿಟ್ಟುಕೊಟ್ಟರು.

ಮುಂದೆ ಚುನಾವಣೆಗೆ ಸ್ಪರ್ಧಿಸಲು ಚಿಹ್ನೆಗಾಗಿ ವಿಚಾರ ಮಾಡುತ್ತಿದ್ದಾಗ ಶ್ರೀಮತಿ ಇಂದಿರಾಗಾಂಧಿರವರಿಗೆ ತಮ್ಮ ಸಲಹೆಯನ್ನು ನೀಡಿದವರು ಎಂ.ವಿ. ಕೃಷ್ಣಪ್ಪನವರು.

ಎಂ.ವಿ. ಕೃಷ್ಣಪ್ಪನವರ ಸಲಹೆ ಪ್ರಕಾರ ಕಾಂಗ್ರೆಸ್ ಪಕ್ಷದ ಗುರ್ತಾಗಿ ನಿಂತದ್ದು 'ಹಸು–ಕರು'. ಇದು ಎಂ.ವಿ.ಕೆ. ರವರಿಗೆ 'ಹಸು'ಗಳ ಬಗ್ಗೆ ರೈತರ ಬಗೆಗಿನ ಕಾಳಜಿಯನ್ನು ಅಭಿವ್ಯಕ್ತಪಡಿಸುತ್ತದೆ.

ರಾಜ್ಯ ರಾಜಕಾರಣದಲ್ಲಿ ಶ್ರೀ ಎಸ್. ನಿಜಲಿಂಗಪ್ಪನವರು 'ಓ' ಕಾಂಗ್ರೆಸ್‌ನ ನಾಯಕತ್ವ ವಹಿಸಿದರೆ ಎಂ.ವಿ.ಕೆ. ಅವರು ಕರ್ನಾಟಕದಲ್ಲಿ ಐ ಕಾಂಗ್ರಸ್‌ನ ನಾಯಕತ್ವವನ್ನು ಪಡೆದು ರಾಜ್ಯ ರಾಜಕಾರಣದಲ್ಲಿ ಪ್ರಮುಖ ಸ್ಥಾನ ಪಡೆಯುವರು.

ಒಟ್ಟು ಐದು ಸಲ ಲೋಕಸಭಾ ಸದಸ್ಯರಾಗಿ ಒಂದು ಸಲ ಕರ್ನಾಟಕ ರಾಜ್ಯ ವಿಧಾನ ಪರಿಷತ್ ಸದಸ್ಯರಾಗಿ ಕೇಂದ್ರ ಹಾಗೂ ರಾಜ್ಯಗಳಲ್ಲಿ ಸಚಿವರಾಗಿ ಸೇವೆ ಸಲ್ಲಿಸಿದ ಶ್ರೀ ಎಂ.ವಿ.ಕೆ. ಅವರು ಅನಾರೋಗ್ಯದ ಕಾರಣ ಬೆಂಗಳೂರಿನ ಖಾಸಗಿ ನರ್ಸಿಂಗ್ ಹೋಮ್‌ನಲ್ಲಿ ಸೇರಿದರು. 1980 ಆಗಸ್ಟ್ ಒಂದನೇ ತಾರೀಖು ಮಣ್ಣಿನ ಮಗ ಭೂಮಿಯಿಂದ ಮೋಕ್ಷ ಪಡೆದರು. ಆದರೆ ದೇಶದ ಜನತೆ ಇವರನ್ನು ಮರೆಯಲು ಸಾಧ್ಯವೇ ಇಲ್ಲ ಎನ್ನುವ ಹಾಗೆ ಮಣ್ಣಿನ ಮಕ್ಕಳಿಗೆ ಬದುಕನ್ನು ನೀಡಿ ಹೋದ ನಿಸ್ವಾರ್ಥ ಸೇವೆಯ ಮಹಾನುಭಾವ ಶ್ರೀ ಎಂ.ವಿ. ಕೃಷ್ಣಪ್ಪನವರು.

**ಕೃಷ್ಣಪ್ಪನವರು ರೈತರ ಮನೆತನದಲ್ಲಿ ಜನಿಸಿದ್ದರಿಂದ ರೈತರ ಸಂಕಷ್ಟಗಳು ಸಂಪೂರ್ಣವಾಗಿ ಅರಿತಿದ್ದರು. ರೈತರ ಕಷ್ಟ ಸುಖಗಳಿಗೆ ಸ್ಪಂದಿಸುತ್ತಿದ್ದರು. ರೈತರಿಗೆ ಇವರು ಮಾಡಿದ ಯೋಜನೆಗಳು ಶ್ಲಾಘನೀಯ.**

**ಪಂಜಾಬ್ ರಾಜ್ಯಕ್ಕೆ 'ಸಣ್ಣ ನೀರಾವರಿ ಯೋಜನೆ'ಗೆಂದು 1951–52ರಲ್ಲಿ 213.6 ಲಕ್ಷ ರೂಪಾಯಿಗಳನ್ನು ಮಾಡಿದರು. ಒಟ್ಟು ಯೋಜನೆಗಳು 4863. ಈ ಯೋಜನೆಯ ಫಲಾನುಭವದ ಭೂಪ್ರದೇಶ 3,88,531 ಎಕರೆಗಳಷ್ಟು. 1952–53ರ ಆವಧಿಯಲ್ಲಿ 4,84,133 ಎಕರೆಗಳಷ್ಟು ಯೋಜನೆಯ ಫಲಾನುಭವದ ಭೂ ಪ್ರದೇಶ ಬಳಸಿಕೊಳ್ಳಬಹುದೆಂಬ ಅಂದಾಜು.**

**ಆರ್ಥಿಕವಾಗಿ ಹಿಂದುಳಿದ ಪ್ರದೇಶಗಳಿಗೆ "ಸಣ್ಣ ನೀರಾವರಿ ಯೋಜನೆ"ಯು ಸಹಾಯಹಸ್ತ ನೀಡುವುದು. ಕೇಂದ್ರ ಸರ್ಕಾರ ಈ ಯೋಜನೆಯ ಅಡಿಯಲ್ಲಿ ಮೈಸೂರಿಗೆ ಬಿಡುಗಡೆಗೊಳಿಸಿದ ಹಣ 102.72 ಲಕ್ಷ. ಹಾಗೆಯೇ ಮೈಸೂರಿಗೆ ಸಾಲ ಸಹ ರೂ. 210.10 ಲಕ್ಷ ಕೇಂದ್ರ ಸರ್ಕಾರದಿಂದ ಶ್ರೀಯುತರಾದ ಎಂ.ವಿ. ಕೃಷ್ಣಪ್ಪ ಬಿಡುಗಡೆಗೊಳಿಸಿದರು.**

* * * * *

# ಪಾರ್ಲಿಮೆಂಟಿನಲ್ಲಿ ಪ್ರಥಮ ಭಾಷಣ

## 1952

**ಎಂ.ವಿ. ಕೃಷ್ಣಪ್ಪನವರು ಕರ್ನಾಟಕದ ಕೋಲಾರ ಲೋಕಸಭಾ ಕ್ಷೇತ್ರದಿಂದ ಆಯ್ಕೆಯಾದ ನಂತರ ಅವರ ಮೊಟ್ಟಮೊದಲ ಭಾಷಣ ಭಾಷಾವಾರು ಪ್ರಾಂತ್ಯಗಳ ಬಗ್ಗೆ ಎಂ.ವಿ.ಕೆ. ಅವರು ಸದನದಲ್ಲಿ ಮಾತನಾಡಿದ ಮಾತುಗಳು ಎಲ್ಲ ಸದಸ್ಯರ ಗಮನವನ್ನು ಸೆಳೆಯಿತು.**

ಎಂ.ವಿ.ಕೆ. ಅವರು ಸದನದಲ್ಲಿ ಮಾತನಾಡಿದ ಭಾಷಣ:–

Shri M.V. Krishnappa (Kolar): Sir, I crave your Indulgence and the indulgence of the House as this the first time that I am speaking or the floor of this august House. I am here to oppose the formation of lingustic provinces because it is detrimental to the country's interests and is going to Jeopardise the unity of this great nation.

Of all people I was surprised at the speech of Dr. Lanka Sundaram for whom I had great reverence. When I heard his name I was wondering myself as to how there could be a Sundaram In Lanka. Then I thought of vibhishana that great diplomat, the realist who could appreciate the situation. So I thought here could be a Sundaram in Lanka that is Vibhishana of Lanka.

Today a great Internationalist like Lanka Sundaram - aswhile speaking herefers to Internationalish and other things - want to distribute this land on a linguistic basis.

I was astonished when he made a reference to Kolar. I have got the honour of representing that area which is in Mysore. It is the golden part of India - so to say about 95 percent of Indian gold is produced there Mysore is not a unilingual area - it is a Multilingual area. The progress of Mysore has been achieved not by the labours of Kannadigas alone there are the Tamils; there are the Telugus. We in Mysore have developed a cosmopolitan out look since a long time.

Dr. Lanka Sundaram: I made a reference to Kolar in terms of the resolution of the provincial congress committee of Andhra Desh.

Shri M.V. Krishnappa: In Mysore we have developed a peculiar culture of our own. We have developmed a cosmopolitan out look - which is very essential for the progress of this great nation.

Though there are Telugus and Tamils. We do not belive that they are in any way different from us infact Mysore is a meeting place of all these cultures. We have got a happy combination. of three culturess in Bangalore which is the capital of Mysore.

Sir, C.V. Raman, the great scientist after going round the world has come to the conclusion that there is no more beautiful city than Bangalore. This is the great invention of that scientist the beauty of Bangalore is not due to the labours of the Kannada People alone. It is because we have developed a cosmopolitan out look and we welcome everybody. Even foreigners when they come to Bangalore feel homely and express it in no uncertain terms.

My hon. friend Dr. Lanka Sundaram wants a portion of Mysore that is the Kolar Gold Fields, which I have the honour to represent, to be included in Andhra Desh. We the Mysoreans are not prepared for it. We are not prepared to go to any part of Karnataka either it has been openly expressed a number of times.

In the Mysore Assembly that greater Mysore would welcome the inclusion of pockets and carridors around Mysore speaking Kannada some of my friends coming from Rayalaseema are prepared to join Mysore provided Bangalore would be the capital because they feel that they would be more homely with the people of Mysore then with Andhra or Madras. I can appreciate the fact that there is a good case for the distribution of Madras provinance according to administrative convenience that is because of the unwieldy nature and size of the province and its heterogeneous composition.

As I said already we Mysoreans are not prepared to join any part of India. We have developed a cosmopolitan culture and out look of our own. There are three communities living in Mysore speaking three different languages. But we have made such a happy combination that we are not going to yield to Mysore being merged with any part of India.

Coming to my communist freinds, I am surprised to see the number of resolutions tabled by them. I had the opportunity of meeting

Mr. Gopalan on three or four occasions when he visited Kolar Gold Fields. It is a pre dominantly labour area and I had to oppose a communist candidate. Mr. Gopalan addressed two or three meetings in Kolar. I attended almost all the public meetings after Gopalan had made a speech. I used to addres the same audince. But the House would be surprised to know that Mr. Gopalan never said a word about linguistic provinces in any of the meetings. But here in this House the Communist seem to be the champions of all causes in.

This great land, - not be cause they are interested in this province or that province, but because the want to creat as much trouble as possible for the existing Government. They want to wreck this constitution; they want to Jeopardise the national unity of this great land. I know many of the inconsistencies of my communist frinds. I am a Super-Communist myself, I may not look like a communist; I may not have unruly hari; I may not wear a pair of Spectacles; I may not have my Shirts inside my pants; or carry a bag supposed to contain documents.

* * * * *

# ಚೀನಾ ಹಾಗೂ ಬರ್ಮಾ ದೇಶದಿಂದ ಅಕ್ಕಿ ಆಮದು
## 1952

ಮಾನ್ಯ ಎಂ.ವಿ. ಕೃಷ್ಣಪ್ಪನವರು ಕೃಷಿ ಹಾಗೂ ಆಹಾರ ಖಾತೆಯ ಮಂತ್ರಿಗಳಾಗಿರುವಂತಹ ಸಮಯದಲ್ಲಿ ದೇಶ ಆಹಾರ ಧಾನ್ಯಗಳ ಸಮಸ್ಯೆಯನ್ನು ಎದುರಿಸುತ್ತಿತ್ತು. 1952ರಲ್ಲಿ ಚೀನಾ ಹಾಗೂ ಬರ್ಮಾ ದೇಶಗಳ ಜೊತೆ ಸಚಿವರು ಉತ್ತಮ ಬಾಂದವ್ಯವನ್ನು ಹೊಂದಿದ್ದರು. ಈ ಅವಧಿಯಲ್ಲಿ ಚೀನಾ ದೇಶದಿಂದ ಸುಮಾರು 1,50,000 ಮೆಟ್ರಿಕ್ ಟನ್‌ಗಳಷ್ಟು ಅಕ್ಕಿಯನ್ನು ಆಮದು ಮಾಡಿಕೊಂಡರು ಹಾಗೆಯೇ ಬರ್ಮಾ ದೇಶದಿಂದ ಮೂರುವರೆ ಲಕ್ಷ ಟನ್‌ಗಳಷ್ಟು ಅಕ್ಕಿಯನ್ನು ತರಿಸಿಕೊಂಡರು. ಈ ಮೂಲಕ ಆಹಾರದ ಸಮಸ್ಯೆಯನ್ನು ಪರಿಹರಿಸಲು ಸಾಧ್ಯವಾಯಿತು. ಇದಕ್ಕೆ ಸಂಬಂಧಿಸಿದಂತೆ ಸದನದಲ್ಲಿ ಎಂ.ವಿ.ಕೆ ಯವರು ನೀಡಿದ ಉತ್ತರ:–

**Sardar Hukam Singh:** Will the Minister of Food and Agriculture be pleased to state whether the people's Government of China have supplied the quantity of rice stipulated under the agreement of 1952?

**The Deputy Minister of Food and Agriculture** (Shri M.V. Krishnappa): Yes Sir out of 150,000 metric tons of Rice purchased - under the two agreements about 142,000 tons have already beenn shipped from China and the balance is being lifted.

**Sardar Hukam Singh:** Has the agreement for supply of Rice from China been entered into for one year 1952 only, or is it recurring for some more years also?

**Shri M.V. Krishnappa:** We are unable to come to any such agreement on account of the prevailing high prices. Only with Burma. We have got a contract according to which they have to supply us $3^1/_2$ lakh tons of Rice every year as for China as and when we require rice. If the prices are cheaper than in the case of other countries like Thailand and other rice - exporting countries, we purchase from China. We have not got any permanent contract with China regarding rice.

**Sardar Hukam Singh:** How does the quality of the Chinese rice compare with that of the rice imported from Burma?

**Sri M.V. Krishnappa:** Regarding quality, the Chinese rice is considered to be good rice.

**Shri B.S. Murthy:** May I know whether it is a bilateral agreement? if so, what commodoties are being sent to China in exchange of Rice?

**Shri M.V. Krishnappa:** They were not interested in barter. They were interested in cash and against cash payments. We have purchased about 1,50,000 tons.

**Shri K. Subramanyam:** May I know whether all the rice supplied is of the same quality?

**Shri M.V. Krishnappa:** They were three varieties, fine, super fine and coarse all these three varieties have been supplied.

**Shri K. Subramanyam:** Is it a fact that the same prices were charged for the different varieties supplied, and that the prices were higher compared to the ones prevailing in India?

**Shri M.V. Krishnappa:-** Our local rice is comparatively cheaper than the imported rice. As for the first part of the question, the price paid is the same for all these three varieties. When we entered into the contract first. It was at a particular rate, and they supply us rice, as they go on getting the different varieties.

* * * * *

## ರಷ್ಯ ದೇಶದಿಂದ ದಕ್ಷಿಣ ಭಾರತಕ್ಕೆ ಅನುದಾನ

### 1952

ಮಾನ್ಯ ಕೃಷಿ ಹಾಗೂ ಆಹಾರ ಖಾತೆಯ ಉಪಮಂತ್ರಿಗಳಾದ ಶ್ರೀ ಎಂ.ವಿ. ಕೃಷ್ಣಪ್ಪನವರು, ದಕ್ಷಿಣ ಭಾರತದ ಜನತೆ ಆಹಾರದ ಕೊರತೆಯನ್ನು ಅನುಭವಿಸುತ್ತಿರುವುದನ್ನು ಕಣ್ಣಾರೆ ವೀಕ್ಷಿಸಿ ನೋವನ್ನುಂಡವರು. ಆ ಸಂದರ್ಭದಲ್ಲಿ ರಷ್ಯಾಗೆ ತಮ್ಮ ಮನವಿಯನ್ನು ಸಲ್ಲಿಸಿ ಸಹಾಯ ಯಾಚಿಸಿದರು. ಎಂ.ವಿ.ಕೆ.ರವರ ಮನವಿಗೆ ಸ್ಪಂದಿಸಿದ ರಷ್ಯಾ ತನ್ನ ಸಹಾಯಹಸ್ತ ನೀಡಿತು. ಇದು ಎಂ.ವಿ.ಕೆ. ರವರ ವರ್ಚಸ್ಸನ್ನು, ರಾಜಕೀಯ ಮುತ್ಸದ್ಧಿತನವನ್ನು ಪ್ರದರ್ಶಿಸುತ್ತದೆ ಸರಿ. ಆಡಳಿತ ಹಾಗೂ ಎಡರಂಗದ ಪಕ್ಷಗಳು ಆಶ್ಚರ್ಯದಿಂದ ಎಂ.ವಿ.ಕೆ ರವರನ್ನು ಕಂಡವು. ರಷ್ಯಾದ ಅನುಧಾನವನ್ನು ಕುರಿತು ಲೋಕಸಭೆಯ ಚರ್ಚೆಯಲ್ಲಿ ಶ್ರೀ ಎಂ.ವಿ.ಕೆ. ಅವರನ್ನು ನೀಡಿದ ಉತ್ತರ.

**SHRI B.V. KAKKILAYA:** Will the Minister for Food and Agriculture be pleased to state:

a) the amount of aid in cash and kind received from the central council of Trade Unions in the Union of Socialist Soviet Republics for relief work in Southern India:

b) the arrangements made in India for the distribution of such aid;

c) what is the allocation of such aid between the different areas in Southern India;

d) whether grain received through such aid is being utilised to run gruel kitchens;

e) if the answer to part (d) be in affirmative, whether any new gruel kitchns have been started for the purpose, if so, how many and where

The Deputy Minister for Food and Agriculture (M.V. Krishnappa)

a) 10,000 tons of wheat, 5,000 tons of rice 500,000 tins of condensed milk and a sum of Rs. 2,55,000

b) with the consent of the donors, the gifts were passed on to the Indian Red Cross Society who are distributing the same.

c) Madras 65 percent; 6,500 tons Wheat, 3250 tons Rice, 3,25,000 Milk tins.

Mysore 20 percent: 2000 tons Wheat, 1000 tons Rice, 1,00,000 Milk tins.

Hyderabad 15 percent: 1,500 tons Wheat 750 tons Rice, 75,000 Milk tins.

The gift in cash would be utilized by the Indian Red Cross Society for purchasing additional food grains, clothing etc., for distribution in the scarcity areas of Madra, Mysore and Hyderabad. Distribution will be in the same proportion as above viz. Madras 65 percent, Mysore 20 percent, and Hyderabad 15 percent.

(d) Yes, in Madras and Mysore states

(e) In Madras the grains are being utilised mainly at the existant gruel centres 56 additional gruel centres have also been opened 8 at Bellary, 3 at coimbatore, 3 at Nellore, 35 at North Arcot, 3 at South Arcot and 4 at Salem. In Mysore in addition to the already existing 41 gruel Kitchens, 203 new gruel centres for distributing this aid have been open mostly in the affected districts of Chitradurg, Kolar and Thumkur.

(f) No.

(g) No.

**Shri B.V. Kakkilaya:** Is it not a fact that two-thirds of the gifts supplied to the Mysore Government is being utilised to give wages to workers working in the community projects and other famine construction work?

**Shri M.V. Krishnappa:** The reply to this question that I have already given is "No". In Mysore there are some people who think it below their dignity to reeive the thing by going to the gruel centre and accepting the gift. But they are in distress all the same because of the continous failure of rains for the last four year and they want help. The

ಸರಬರಾಯಿ ಕೇಂದ್ರಕ್ಕೆ ಹಾಲು ಬರುತ್ತಿದೆ. ಇಲ್ಲಿ ಹಾಲಿನ ಬಳಕೆಗೆ ಆಗಿ ಮಿಕ್ಕ ಹಾಲನ್ನು ಬೇಬಿಫುಡ್ ಇತ್ಯಾದಿಗಳನ್ನು ತಯಾರಿಸಲು ಉಪಯೋಗ ಮಾಡಲಾಗುತ್ತಿದೆ. ಇದೇ ರೀತಿ ಸ್ಕೀಮುಗಳು ಈಗ ಇಂಡಿಯಾ ದೇಶಗಳಲ್ಲಿ ಅನೇಕ ಕಡೆಗಳಲ್ಲಿವೆ. ಇಡೀ ಇಂಡಿಯಾ ದೇಶದಲ್ಲಿರುವ ಇಂತಹ 30–40 ಮಿಲ್ಕ್ ಸಪ್ಲೈ ಸ್ಕೀಮುಗಳ ಉಸ್ತುವಾರಿಯನ್ನು ನಾನು ಕೇಂದ್ರದಲ್ಲಿ ಮಂತ್ರಿಯಾಗಿದ್ದಾಗ ಕಳೆದ ಹತ್ತು ವರ್ಷಗಳಿಂದಲೂ ನೋಡುತ್ತಿದ್ದೆನು. ಇಡೀ ಹಿಂದುಸ್ತಾನಕ್ಕೆ ಒಳ್ಳೆಯ ಹೆಸರುವಾಸಿಯಾದ ಒಂದು ಹಾಲು ಸರಬರಾಯಿ ಕೇಂದ್ರ ದೆಹಲಿಯಲ್ಲಿದೆ. ಅದಕ್ಕೆ ನಾನೇ ಹತ್ತು ವರ್ಷ ಕಾಲ ಛೇರ್‌ಮೆನ್ ಆಗಿದ್ದೆ. ಅದು 5 ಕೋಟಿ ರೂಪಾಯಿಗಳ ಒಂದು ದೊಡ್ಡ ಸ್ಕೀಮು. ಅಲ್ಲಿ ದಿನವೊಂದಕ್ಕೆ ಹತ್ತು ಲಕ್ಷ ಪೌಂಡ್ ಹಾಲು ಸರಬರಾಯಿಯಾಗಿ ಬಿಕರಿ ಆಗುತ್ತಿದೆ. ಬೆಂಗಳೂರಿನಲ್ಲಿ ದಿನಕ್ಕೆ 3 ಲಕ್ಷ ಪೌಂಡ್ ಹಾಲು ಮಾತ್ರ ಕಲೆಕ್ಟಾಗಿ ಹಂಚಿಕೆ ಆಗುತ್ತಿದೆ. ಈ ಸ್ಕೀಮನ್ನು ಜನರಿಗೆ ಪ್ರಚಾರ ಮಾಡಿ ಅಭಿವೃದ್ಧಿಗೆ ತರಲು ಎಲ್ಲ ಪ್ರಯತ್ನಗಳನ್ನು ಮಾಡುತ್ತಿದ್ದೇವೆ. ಆದರೆ ಈಗ ರಾಜ್ಯದ ಅನೇಕ ಭಾಗಗಳಲ್ಲಿ ಹಾಲಿನ ಸರಭರಾಯಿ ಸರಿಯಾಗಿ ಆಗುತ್ತಿಲ್ಲವೆಂಬುದು ನಿಜ. ನಾನು ಕಂಡ ಹಾಗೆ ಶ್ರೀರಾಮೇಗೌಡರಿಗೆ ಈ ಸ್ಕೀಮಿನ ಬಗ್ಗೆ ಬಹಳ ಆಸೆ ಇದೆ. ಅವರು ಈ ಹಿಂದೆ ದೆಹಲಿಗೆ ಬಂದಿದ್ದಾಗ ಒಳ್ಳೆಯ ಒಂದು ಕೋಣ ಬೇಕಾಗಿದೆ ಎಂದು ಹೇಳಿ ಅವರು ನನ್ನ ಮನೆಯಲ್ಲೇ ಉಳಿದಿದ್ದರು. ಅವರು ಮತ್ತು ನಾನು ಇಬ್ಬರೂ ಡೆಲ್ಲಿಯ ಸುತ್ತಮುತ್ತ ಎಂಟು–ಹತ್ತು ದಿನ ಒಂದು ಒಳ್ಳೆಯ ಕೋಣನ ಖರೀದಿಗೆ ಸುತ್ತಾಡಿದೆವು.

ಅವರು ತಮ್ಮ ತಾಲ್ಲೂಖನ್ನು ಅಭಿವೃದ್ಧಿಪಡಿಸಬೇಕೆಂಬ ಉದ್ದೇಶದಿಂದ ನನ್ನ ಕಡೆ ಬಂದಿದ್ದರು. ಇದರಲ್ಲಿ ಒಂದು ಅಂಶವನ್ನೇ ಗಮನಿಸಬೇಕಾಗುತ್ತದೆ. ಮಂಡ್ಯ ಜಿಲ್ಲೆಯಲ್ಲಿ ಸಕ್ಕರೆ ಕಾರ್ಖಾನೆ ಬರುವ ಮೊದಲು ರೈತರು ಕಬ್ಬು ಬೆಳೆಯುತ್ತಿರಲಿಲ್ಲ. ಅಲ್ಲಿಯ ರೈತರಿಗೆ ಕಬ್ಬು ಬೆಳೆಯುವುದು ಗೊತ್ತಿರಲಿಲ್ಲ.

ಸಕ್ಕರೆ ಕಾರ್ಖಾನೆ ಪ್ರಾರಂಭವಾದ ಮೇಲೆ ಬೆಳೆದ ಕಬ್ಬನ್ನು ಖಂಡಿತವಾಗಿ ಕೊಂಡುಕೊಳ್ಳಲಾಗುವುದು ಎಂದು ವಾಗ್ದಾನ ಮಾಡಿದ ಮೇಲೆ ಮಂಡ್ಯ ಜಿಲ್ಲೆಯಲ್ಲಿ ಎಲ್ಲಾ ರೈತರು ಕಬ್ಬು ಬೆಳೆಯುವುದಕ್ಕೆ ಪ್ರಾರಂಭಿಸಿದರು. ಮತ್ತು ಕಬ್ಬು ಬೆಳೆಯುವುದರಿಂದ ಮಂಡ್ಯ ಜಿಲ್ಲೆಯ ರೈತರ ಅಭಿವೃದ್ಧಿಯಾಗಿದೆ. ಅದೇ ರೀತಿಯಾಗಿ ಹಾಲಿನ ಕೇಂದ್ರದಿಂದ ಅಭಿವೃದ್ಧಿಯನ್ನು ಕಾಣಬೇಕಾಗಿದೆ. ಹಾಲಿನ ಕೇಂದ್ರಗಳಿಗೆ ಬೇಕಾಗುವ ವ್ಯವಸ್ಥೆಯನ್ನು ಮೊದಲೇ ಪ್ರಾರಂಭ ಮಾಡಬೇಕಾಗಿದೆ. ಏಕೆಂದರೆ ಕಬ್ಬನ್ನು 14 ತಿಂಗಳುಗಳಲ್ಲಿ ಬೆಳೆಯಬಹುದು. ಆದರೆ ಒಳ್ಳೆಯ ಹಸು–ಎಮ್ಮೆಗಳ ಬೆಳವಣಿಗೆಯಾಗಬೇಕಾದರೆ 5--6 ವರ್ಷಗಳು ಬೇಕಾಗುತ್ತದೆ. ಮೊದಲೇ ಈ ಕೆಲಸ ಮಾಡುತ್ತಾ ಹೋದರೆ ಉತ್ತಮ. ದೊಡ್ಡಬಳ್ಳಾಪುರ, ಆನೇಕಲ್ಲು, ಚೆನ್ನಪಟ್ಟಣಗಳಲ್ಲಿ ಒಂದೊಂದು ಕೇಂದ್ರವನ್ನಾಗಿ ಮಾಡುವುದಕ್ಕೆ ಏರ್ಪಾಡು ಮಾಡುತ್ತಿದ್ದೇವೆ. ಅಲ್ಲಿಯ ರೈತರಿಗೆ ಸಾಲ ಕೊಡಲಾಗುತ್ತಿದೆ. ಈ ಹಣದಿಂದ ಒಳ್ಳೆಯ ಜಾತಿಯ ಹಸು–ಎಮ್ಮೆ ಪಾಲನೆ ಮಾಡಲು ಪ್ರೋತ್ಸಾಹ ಕೊಡುವ ಸ್ಕೀಮ್ ನಡೆಯುತ್ತಿದೆ. ಒಂದು ಲಕ್ಷ ಜನ ವಸತಿಯುಳ್ಳ ಎಲ್ಲಾ ಪಟ್ಟಣಗಳಲ್ಲಿ ಮಿಲ್ಕ್ ಸ್ಕೀಂ ಆಗಬೇಕೆಂದು

ಏರ್ಪಾಟು ಮಾಡಲಾಗುತ್ತಿದೆ. ಆನಂತರ ಎಲ್ಲ ಡಿಸ್ಟ್ರಿಕ್ಟ್ ಹೆಡ್‌ಕ್ವಾರ್ಟರ್ಸ್‌ಗಳಲ್ಲಿ ಈ ಸ್ಕೀಂ ಪ್ರಾರಂಭಿಸಬೇಕೆಂಬ ಉದ್ದೇಶವಿದೆ. ಈ 19 ಜಿಲ್ಲಾ ಕೇಂದ್ರಗಳಲ್ಲಿ ಹಾಲಿನ ಯೋಜನೆಯನ್ನು ಮಾಡುವುದಲ್ಲದೆ ಭದ್ರಾವತಿ ಮುಂತಾದ ದೊಡ್ಡ ದೊಡ್ಡ ನಗರಗಳಲ್ಲಿ ಸಹ ಮಾಡಬೇಕೆಂಬ ಆಲೋಚನೆ ಇದೆ. ಅದಕ್ಕೆ ತಕ್ಕ ಏರ್ಪಾಡು ಸಹ ಈಗಾಗಲೇ ನಡೆಯುತ್ತಿದೆ. ಹಸು–ಎಮ್ಮೆಗಳ ಪಾಲನೆಗೆ ಸಾಲ ಕೊಡುವುದನ್ನು "Co-operative Milk Society" ಮುಖಾಂತರ ಮಾಡಲಾಗುವುದು. ಯಾರು ಹಸು ಎಮ್ಮೆಗಳನ್ನಿಟ್ಟುಕೊಂಡು ಹಾಲು ಕೊಡತಕ್ಕ 'Wet members'ಗಳಿಗೆ ಮಾತ್ರ ದೊರೆಯುವ ಸೌಲಭ್ಯ ಇದಾಗಿದೆ. Dry members ಗಳಿಗೆ ದೊರೆಯುವುದಿಲ್ಲ. ನಮ್ಮ ರಾಜ್ಯದಲ್ಲಿ ಎಲ್ಲೆಲ್ಲಿ 'ಮಿಲ್ಕ್ ಸ್ಕೀಂ' ಬರುವುದೋ ಅಲ್ಲಲ್ಲಿ ಬಹುಮಟ್ಟಿಗೆ ತಳಿ ಅಭಿವೃದ್ಧಿಯಾಗುತ್ತದೆ. ಬರೋಡಾದ ಹತ್ತಿರ 'ಆನಂದ್'ದಲ್ಲಿ ಇದನ್ನುನೋಡಿದರೆ ಗೊತ್ತಾಗುತ್ತದೆ. ಮೊದಲು ಅಲ್ಲಿ ಏನೂ ಇರಲಿಲ್ಲ ಅಲ್ಲಿ ಮಿಲ್ಕ್ ಸೆಂಟರ್ ಆದ ನಂತರ ಪ್ರತಿಯೊಬ್ಬ ರೈತನೂ 4–5 ಎಮ್ಮೆಗಳನ್ನು ಇಟ್ಟುಕೊಂಡಿದ್ದಾನೆ. 'ಆನಂದ' ಮತ್ತು 'ಕೈರಾ' ಜಿಲ್ಲೆಗಳಿಂದ ಪ್ರತಿ ದಿವಸ 3 ಲಕ್ಷ ಟನ್ ಹಾಲನ್ನು ಬೊಂಬಾಯಿಗೆ ಕಳುಹಿಸಿ ಕೊಡುತ್ತಿದ್ದಾರೆ. ಈ ಹಾಲಿನ ಯೋಜನೆಯಿಂದ ಈ ಎರಡು ಜಿಲ್ಲೆಗಳಲ್ಲಿ ಬಹಳ ಅಭಿವೃದ್ಧಿಯಾಗಿದೆ. ರೈತರ ಸಂಪಾದನೆಯೂ ಹೆಚ್ಚಾಗಿದೆ. ಒಳ್ಳೆಯ 'ಎಮ್ಮೆ–ಒಳ್ಳೆ ಹಸುಗಳು, ಪ್ರತಿಯೊಬ್ಬ ರೈತನ ಮನೆಯಲ್ಲಿ ನೋಡಲು ಸಿಕ್ಕುತ್ತದೆ. ಪ್ರತಿಯೊಬ್ಬರಿಗೂ ವರ್ಷ ಉದ್ದಕ್ಕೂ ಕೆಲಸವಿದೆ. ಒಳ್ಳೆಯ ಗೊಬ್ಬರ ಸಹ ದೊರೆಯುತ್ತದೆ. ಮನೆಯಲ್ಲಿ ಅವರ ಮಕ್ಕಳೂ ಸಹ ಹಾಲು ಕುಡಿಯುತ್ತಿವೆ. ಒಟ್ಟಿನಲ್ಲಿ ಮಿಲ್ಕ್ ಸ್ಕೀಮ್ ಒಳ್ಳೆಯ ಅಭಿವೃದ್ಧಿಯಾಗುತ್ತದೆ. ಆದುದರಿಂದ ಮೈಸೂರು ರಾಜ್ಯದಲ್ಲಿಯೂ ಒಳ್ಳೆಯ ತಳಿಯ ಹಸು ಎಮ್ಮೆಗಳನ್ನು ಪಾಲನೆ ಮಾಡಿಕೊಂಡು ಹಾಲಿನ ಯೋಜನೆಯನ್ನು ಬೇಗನೇ ಕಾರ್ಯರೂಪಕ್ಕೆ ತರಬೇಕೆಂದು ಪ್ರಯತ್ನ ಮಾಡುತ್ತಿದ್ದೇನೆ. ಅಭಿವೃದ್ಧಿಗೆ ಇದೊಂದು ಒಳ್ಳೆಯ ಮಾರ್ಗ. ಈ ಸಭೆಯಲ್ಲಿ ಪಶುಪಾಲನೆಯು ಚೆನ್ನಾಗಿ ಆಗಬೇಕೆಂದು ಹೇಳತಕ್ಕವರು ಶ್ರೀ ಹುಚ್ಚೇಗೌಡರು ಒಬ್ಬರಾಗಿದ್ದಾರೆ. ಈ ಯೋಜನೆಯ ಬಗ್ಗೆ ಅವರಿಗೆ ಆಸಕ್ತಿ ಹೆಚ್ಚಾಗಿದೆ. ಒಳ್ಳೆಯ ತಳಿಯ ಹಸು ಎಮ್ಮೆಗಳ ಬಗ್ಗೆ ಅಭಿಮಾನ ಆಸಕ್ತಿ ಇಟ್ಟುಕೊಂಡಿದ್ದಾರೆ. ನಮ್ಮ ಮೈಸೂರು ರಾಜ್ಯದಲ್ಲಿ ಅಮೃತ ಮಹಾಲ್ ಕಾವಲುಗಳಿವೆ. ಅವುಗಳನ್ನು ಹಂಚಿಕೊಡಬೇಕೆಂದು ಬಹಳ ಒತ್ತಾಯ ಬರುತ್ತಿದೆ. ಒಂದು ಸಲ ಈ ಜಮೀನನ್ನು ಹಂಚಿದ ಮೇಲೆ ಪುನಃ ಹುಲ್ಲಿಗಾಗಿ ಅಮೃತಕಾವಲು ಮಾಡುವುದಕ್ಕಾಗುವುದಿಲ್ಲ. ಮೈಸೂರು ಸಂಸ್ಥಾನದಲ್ಲಿ ಅದು ಹೇಗೋ ಉಳಿದುಕೊಂಡು ಬಂದಿದೆ. ಅದನ್ನು ಅಭಿವೃದ್ಧಿಪಡಿಸಬೇಕೇ ಹೊರತು ಅಮೃತಮಹಲ್ ಕಾವಲನ್ನು ಹಂಚಿಕೊಡಬಾರದು

ಒಂದು ಎಕರೆ ಜಮೀನು ಒಬ್ಬ ಮನಿಷ್ಯನಿಗೆ ದೊರೆತರೆ ಉಪಜೀವನ ಮಾಡಬಹುದು. ವ್ಯವಸಾಯದ ಜೊತೆಗೆ ಎರಡು ಎಮ್ಮೆಗಳನ್ನು ಇಟ್ಟುಕೊಳ್ಳಬಹುದು. ನಮ್ಮ ರಾಜ್ಯದಲ್ಲಿ ಪ್ರಜಾಸಂಖ್ಯೆ ಎಷ್ಟಿದೆಯೋ ಅಷ್ಟೇ ಸಂಖ್ಯೆಯಲ್ಲಿ ಪಶುಗಳಿವೆ. ಎಮ್ಮೆ, ಹಸು, ಕುರಿ, ಕತ್ತೆಗಳಿವೆ.

**"ಶ್ರೀ ಸಿ.ಜೆ. ಮುಕ್ಕಣ್ಣಪ್ಪ"** ಕತ್ತೆ ಕುರಿಗಳ ಸೆನ್ಸಸ್ ಯಾವಾಗ ಆಯಿತು ಸ್ವಾಮಿ.

**ಶ್ರೀ ಎಂ.ವಿ. ಕೃಷ್ಣಪ್ಪ:** ನಮ್ಮ ರಾಜ್ಯದಲ್ಲಿ ಎಮ್ಮೆ ಹಸುಗಳ ಹಾಗೆ ಕುರಿಗಳೂ ಹೆಚ್ಚಾಗಿವೆ. ಅದರಲ್ಲಿಯೂ ಕತ್ತೆಗಳ ಸಂಖ್ಯೆ 2,36,000 ಇದೆ. ತುಮಕೂರು ಕೋಲಾರ ಜಿಲ್ಲೆಗಳಲ್ಲಿ ಕತ್ತೆಗಳು ಹೆಚ್ಚಿನ ಸಂಖ್ಯೆಯಲ್ಲಿದೆ (ನಗು)

ಭೂಮಿ ಇಲ್ಲದೆ ಈ ಪ್ರಾಣಿಗಳು ಬದುಕಲಾರವು. ಪಶುಸಂಪತ್ತಿಗೆ ಭೂಮಿ ಇರಬೇಕಾದದ್ದು ಅಗತ್ಯ ಕತ್ತೆಗಳ ಬಗ್ಗೆ ನಿಕೃಷ್ಟ ಭಾವನೆಯಿಂದ ನೋಡುವುದು ಒಳ್ಳೆಯದಲ್ಲ. ಕತ್ತೆಗಳು ಮಾಡುವಷ್ಟು ಕೆಲಸವನ್ನು ಯಾರೂ ಮಾಡುವುದಿಲ್ಲ. ಆದ್ದರಿಂದ ಕತ್ತೆಗಳ ಬಗ್ಗೆ ಏಕೆ ಅನಾದಾರ ತೋರಿಸಬೇಕು? It is also part of the live stock. I have got a breading donkey, which cost Rs. 60,000 in Kamal farm.

* * * * *

## ಕೋಳಿ ಸಾಕಾಣಿಕೆ

**ಶ್ರೀ ಕೆ.ವಿ. ಬೈರೇಗೌಡ:** ಮಾನ್ಯ ಮಂತ್ರಿಗಳು ಹಸು ಕುರಿ ಇವುಗಳ ಬಗ್ಗೆ ಹೇಳಿದರು. ಕೋಳಿ ಸಾಕಾಣಿಕೆಯ ಬಗ್ಗೆ ಏನು ಕಾರ್ಯಕ್ರಮ ತೆಗೆದುಕೊಳ್ಳಬೇಕೆಂದು ಇದ್ದಾರೆ.

**ಶ್ರೀ ಎಂ.ವಿ. ಕೃಷ್ಣಪ್ಪ:** ಮಾನ್ಯ ಸದಸ್ಯರ ತಮ್ಮಂದಿರಾದ ಶ್ರೀ ಜಯರಾಮಗೌಡರು one of the most important poultry breeders. ಅವರು ಬಹಳ ಚೆನ್ನಾಗಿ ಸಾಕುತ್ತಾರೆ. Educated young men are taking to poultry. ಸರಿಯಾಗ marketing facilities ಇಲ್ಲದೆ ಇರುವುದರಿಂದ ತೊಂದರೆಯಾಗುತ್ತಿದೆ. Hesaragatta Farm is one of the biggest farms in India and very well managed. It is understaffed. ಸಿಬ್ಬಂದಿ ಮತ್ತು ಕಟ್ಟಡಗಳನ್ನು ಒದಗಿಸಬೇಕೆಂದು ಅಲೋಚನೆ ಮಾಡುತ್ತಿದ್ದೇವೆ. ಜಿಲ್ಲೆಗೆ ಒಂದೊಂದರಂತೆ 20 Extension Centres ಇವೆ, ಯುವಕರಿಗೆ ತರಬೇತಿ ಕೊಡಲು ಹೆಸರಘಟ್ಟದಲ್ಲಿ Regional Farm ಪ್ರಾರಂಭ ಮಾಡಲು ಕೇಂದ್ರ ಸರ್ಕಾರದಿಂದ ಕಟ್ಟಡಗಳನ್ನು ಕಟ್ಟಿಸಿ ಆಗಿದೆ. ಮೈಸೂರು, ಕೇರಳ, ಆಂಧ್ರ ಮತ್ತು ಮದ್ರಾಸ್ ಈ ನಾಲ್ಕು ರಾಜ್ಯಗಳಲ್ಲಿನ ಯುವಕರಿಗೆ ಟ್ರೈನಿಂಗ್ ಕೊಡಬೇಕೆಂಬ ಒಂದು ಯೋಜನೆ ಇದೆ. ಅದರ ಮುಖಾಂತರವಾಗಿ ಮತ್ತು ನಾವು ಬೇರೇ ಟ್ರೈನಿಂಗ್ ಕೊಡಬೇಕೆಂದಿದ್ದೇವೆ.

**ಶ್ರೀ ಎಂ.ವಿ. ಕೃಷ್ಣಪ್ಪ:** ಫಾರಂಗಳಲ್ಲಿನ ಸಾಕುತ್ತಿರುವ ಕೋಳಿಗಳನ್ನು ಹಳ್ಳಿಗಳಿಗೆ ಕೊಟ್ಟ ತಕ್ಷಣ ಅವು ಸತ್ತುಹೋಗುತ್ತವೆಂದು ಒಪ್ಪಿಕೊಂಡಿದ್ದಾರೆ. ಅವುಗಳಿಗೆ Anty biotics ಕೊಡುವುದರಿಂದ diseases resistance ಇರುವುದಿಲ್ಲ. Cost ಬಹಳ ಜಾಸ್ತಿಯಾಗಿ ಲಾಭ ಅಥವಾ ನಷ್ಟವಿಲ್ಲದೆ ನಡೆಯುತ್ತದೆ. ಇದಕ್ಕೆ ಏನು ಕಾರ್ಯಕ್ರಮ ತೆಗೆದುಕೊಳ್ಳಬೇಕೆಂದು ಸರ್ಕಾರ ಯೋಚನೆ ಮಾಡಿದೆ.

**ಶ್ರೀ ಎಂ.ವಿ. ಕೃಷ್ಣಪ್ಪ:** ಕೋಳಿ ಸಾಕಿದವನು ಕೋಟ್ಯಾಧೀಶ್ವರನಾಗುತ್ತಾನೆ. ಆದರೆ ಅವಕ್ಕೆ ಕೊಕ್ಕರೆ ರೋಗ ಮಾತ್ರ ಬಾರದಿರಬೇಕು ಕೊಕ್ಕರೆ ರೋಗ ಬಂದು ಬಹಳ ನಷ್ಟವಾಗುತ್ತದೆ. ಇದಕ್ಕೆ ಔಷಧಿ ಕಂಡುಹಿಡಿದಿದ್ದಾರೆ. Fowl pox, tick fever, ಇವುಗಳಿಗೆ ಔಷಧಿ ಇವೆ ಈಚೆಗೆ ಯಾವುದೋ ಒಂದು ಗೊತ್ತಿಲ್ಲದ ರೋಗ ಪ್ರಬಲವಾಗುತ್ತಿದೆ. ಅದರ ಬಗ್ಗೆ ಸೂಕ್ತ ಕಾರ್ಯಕ್ರಮವನ್ನು ಏರ್ಪಾಡು ಮಾಡುತ್ತೇವೆ ಈಗಾಗಲೆ ಬಹಳ ಸಲೀಸಾಗಿ, ನಷ್ಟ ಮಾಡಿಕೊಂಡು Foundation Stocks ಸಪ್ಲೈ ಮಾಡುತ್ತಿದ್ದೇವೆ. ಮಾನ್ಯ ಸದಸ್ಯರು ಹಣವನ್ನು ಮಂಜೂರು ಮಾಡಿದರೆ ಇನ್ನೂ ಸ್ವಲ್ಪ ಕಡಿಮೆ ಬೆಲೆಗೆ ಕೊಡಬಹುದು.

* * * * *

# 1962-63ರ ಬೇಡಿಕೆ ಮೇಲಿನ ಚರ್ಚೆ

**ಮಾನ್ಯ ಎಂ.ವಿ. ಕೃಷ್ಣಪ್ಪ ಅವರು ಕಂದಾಯ ಸಚಿವರಾಗಿ ವಿಧಾನಸಭೆಯಲ್ಲಿ ಕಂದಾಯ ಇಲಾಖೆಯ ಆಯವ್ಯಯ ಅಂದಾಜು ವೆಚ್ಚದ ಬೇಡಿಕೆಯನ್ನು ಮಂಡಿಸಿದರು. ಇದಕ್ಕೆ ಸಂಬಂಧಿಸಿದಂತೆ ವಿರೋಧ ಪಕ್ಷದವರ ಚರ್ಚೆಯಲ್ಲಿ ಶ್ರೀ ಎಂ.ವಿ. ಕೃಷ್ಣಪ್ಪ ಅವರು ಭಾಗವಹಿಸಿ ಉತ್ತರಿಸಿದರು.**

ಶ್ರೀ ಎಂ.ವಿ. ಕೃಷ್ಣಪ್ಪ (**ಕಂದಾಯ ಶಾಖೆಯ ಮಂತ್ರಿಗಳು**): ಮಾನ್ಯ ಅಧ್ಯಕ್ಷರೇ, ನಿನ್ನೆಯಿಂದ ರೆವಿನ್ಯೂ ಖಾತೆಯ ಬೇಡಿಕೆ ವಿಷಯದಲ್ಲಿ ಮಾನ್ಯ ಸದಸ್ಯರು ಮಾತನಾಡುತ್ತಾ ಬಹಳ ಉಪಯುಕ್ತವಾದ ಸಲಹೆಗಳನ್ನು ಕೊಟ್ಟಿದ್ದಾರೆ. ಶ್ರೀಯುತರುಗಳಾದ ಕೇಶವಮೂರ್ತಿ, ಎಂ.ಆರ್. ಪಾಟೀಲ್, ದೇವೇಗೌಡ, ಜೆ. ನಾರಾಯಣಪ್ಪ, ಕದಂ, ದೊಡ್ಡಮೇಟಿ, ಬಸಪ್ಪ, ಬೈರೇಗೌಡ, ರಾಮೇಗೌಡ, ಬಿ.ಎಲ್.ಗೌಡ ಮುಂತಾದ ಸುಮಾರು ಹತ್ತು ಜನ ಸದಸ್ಯರು ನಮ್ಮ ಇಲಾಖೆಗೆ ಸಂಬಂಧಪಟ್ಟ ಬೇಡಿಕೆ ವಿಷಯವಾಗಿ ಮಾತನಾಡಿ ಕೆಲವು ವಿಚಾರಗಳನ್ನು ಹೇಳಿದ್ದಾರೆ. ಅವರು ಕೊಟ್ಟ ಬಹಳ ಪ್ರಾಮುಖ್ಯವಾದ ಸಲಹೆಗಳಲ್ಲಿ ಮೊದಲನೆಯದು ಲ್ಯಾಂಡ್ ಅಕ್ವಿಜಿಷನ್ ಸಿಸ್ಟಂಗೆ ಸಂಬಂಧಪಟ್ಟಿದೆ ಎಂದು ನಾನು ಭಾವಿಸಿಕೊಂಡಿದ್ದೇನೆ. ಕೆಲವು ಸದಸ್ಯರು ಅನೇಕ ಉಪಯುಕ್ತವಾದ ಸಲಹೆಗಳನ್ನು ಕೊಟ್ಟಿದ್ದಾರೆ. ಈಗಿರುವ ಲ್ಯಾಂಡ್ ಅಕ್ವಿಜಿಷನ್ ಪದ್ಧತಿ ಸರ್ಕಾರಕ್ಕೆ ಅಷ್ಟು ತೃಪ್ತಿಕರವಾಗಿ ಕಾಣುತ್ತಿಲ್ಲ. ಈ ವಿಷಯದಲ್ಲಿ ಅನೇಕ ಪ್ರಶ್ನೆಗಳಿಗೆ ಉತ್ತರ ಕೊಡುವಾಗ ಇದೇ ಸಭೆಯಲ್ಲಿ ಸರ್ಕಾರದ ಅಭಿಪ್ರಾಯವನ್ನು ಹೇಳಿದ್ದೇನೆ. ಈಗ ಅಕ್ವಿಜಿಷನ್ ಸಾಮಾನ್ಯವಾಗಿ ನಿಧಾನವಾಗುತ್ತಿದೆ. ಇದರಿಂದ ಬಹಳ ಜನರಿಗೆ ತೊಂದರೆ. ಇದನ್ನು ತಪ್ಪಿಸಲು ಏನು ಮಾಡಬೇಕೆಂಬುದನ್ನು ವಿಮರ್ಶೆ ಮಾಡಿ ಸಾಧ್ಯವಾದಷ್ಟು ತೀವ್ರವಾಗಿ, ವೇಗವಾಗಿ ಅಕ್ವಿಜಿಷನ್ ಆಗಲು ಸಂಬಂಧಪಟ್ಟ ಇಲಾಖಾ ಅಧಿಕಾರಿ ಮತ್ತು ಅನುಭವಸ್ಥರಾದ ಕೆಲವು ಮಾನ್ಯ ಸದಸ್ಯರನ್ನೊಳಗೊಂಡ ಒಂದು ಸಭೆಯನ್ನು ಕರೆದು ಸಲಹೆ ಪಡೆಯಬೇಕೆಂದಿದ್ದೇನೆ. ಶ್ರೀ ಎಂ.ಆರ್. ಪಾಟೀಲರ ಬಹಳ ಅನುಭವದಿಂದ ಒಳ್ಳೆಯ ಕೆಲವು ಸಲಹೆಗಳನ್ನು ನೀಡಿದ್ದಾರೆ ಉಪಯುಕ್ತವಾಗಿದೆ ಈ ಎಲ್ಲ ಸಲಹೆಗಳನ್ನು ಗಮನಕ್ಕೆ ತೆಗೆದುಕೊಳ್ಳುತ್ತೇವೆ. ಈಗ ಹಳ್ಳಿಗಳಲ್ಲಿ ಕೆಲವು ವರ್ಷಗಳಿಂದ ಜನಸಂಖ್ಯೆ ಜಾಸ್ತಿಯಾಗುತ್ತಿದೆ ಅಲ್ಲದೆ ಗ್ರಾಮದ ಸುತ್ತುಮುತ್ತ ಬಹಳ ಫಲವತ್ತಾದ ಜಮೀನಿದೆ. ಇದೊಂದು ದೊಡ್ಡ ಕಾರಣ ನಿಧಾನವಾಗುವುದಕ್ಕೆ. ಎರಡನೆಯದಾಗಿ ಗ್ರಾಮಗಳಲ್ಲಿ ವ್ಯಾಜ್ಯ, ಪಾರ್ಟಿ ಇರುವುದು, ಈ ಕೆಲವು ಕಾರಣಗಳಿಂದ ತೀವ್ರತೆಯಿಂದ ಅಕ್ವೈರ್ ಮಾಡುವುದಕ್ಕೆ ಆಸ್ಪದವಿಲ್ಲದೆ ಸ್ವಲ್ಪ ನಿಧಾನವಾಗುತ್ತಿದೆ. ಗ್ರಾಮಗಳಲ್ಲಿ ಈಗ ಜನಸಂಖ್ಯೆ ಹೆಚ್ಚಿರುವುದರಿಂದ ವಾಸಕ್ಕೆ ಸ್ಥಳ ಸಾಲದೆ ಜನರಿಗೆ ಬಹಳ ತೊಂದರೆಯಾಗಿದೆ. ಅಕ್ವಿಜಿಷನ್ ಎಮರ್ಜೆನ್ಸಿ ಲೆಜಿಸ್ಲೇಷನ್‌ಗೆ ಸಂಬಂಧಿಸಿದ 17ನೆಯ ಸೆಕ್ಷನ್ ಪದೇ ಪದೇ ಉಪಯೋಗಿಸಬಾರದೆಂದು ಹೈಕೋರ್ಟ್ ತಿಳಿಸಿದೆ. ಹಳ್ಳಿ ಕುಟುಂಬದವರು ಸ್ಥಳವಿಲ್ಲದೆ ನೂರಾರು ಬಡರೈತರು ಅನಾರೋಗ್ಯದಿಂದ ನರಳುತ್ತಿದ್ದಾರೆ. ಮನೆಕಟ್ಟಿಕೊಳ್ಳಲು ಸ್ಥಳವಿಲ್ಲ, ದನಕರುಗಳನ್ನು ಕಟ್ಟಿಕೊಳ್ಳುವುದಕ್ಕೆ ಸ್ಥಳವಿಲ್ಲದೆ ಬೇರೆಯವರ ನಿವೇಶನಗಳಲ್ಲಿ ಅವನ್ನು ಕಟ್ಟುತ್ತ

ಅನಾನುಕೂಲಕ್ಕೆ ಗುರಿಯಾಗಿರುತ್ತಾರೆ. ಆದ್ದರಿಂದ ಲ್ಯಾಂಡ್ ಅಕ್ವಿಸಿಷನ್ ಕೇಸುಗಳನ್ನು ಸಾಧ್ಯವಾದಷ್ಟು ಬೇಗನೆ ಇತ್ಯರ್ಥ ಮಾಡುವ ದೃಷ್ಟಿಯಿಂದ ಈಗಿರುವ ಪದ್ಧತಿಯನ್ನು ಬದಲಾಯಿಸುವುದನ್ನು ಯೋಚನೆ ಮಾಡುತ್ತಿದ್ದೇವೆ.

ಎರಡನೆಯದಾಗಿ ಭೂ ಹಂಚಿಕೆಯ ವಿಷಯ ನಮ್ಮ ಸಂಸ್ಥಾನದಲ್ಲಿನ ಭೂಮಿಯಲ್ಲಿ ಬಹಳ ಭೂಮಿಯನ್ನು ಈಗಾಗಲೆ ಹಂಚಿಬಿಟ್ಟಿದ್ದೀವಿ. ಈಗ ಉಳಿದಿರುವುದು ಬಹಳ ಕಡಿಮೆ. ಇರುವ ಭೂಮಿ ಬಗ್ಗೆ ಅಮಲ್ದಾರರ ಹತ್ತಿರ ವಿಚಾರಿಸಿ ಹಂಚುವ ಕಾರ್ಯಕ್ರಮ ಕೈಗೊಳ್ಳಬಹುದು.

Famine Relief ವಿಷಯ ಬಂತು. ಮಾನ್ಯ ಸದಸ್ಯರನೇಕರು ಮಾತನಾಡಿದ್ದಾರೆ. ಅದರಲ್ಲೂ ಶ್ರೀಮಾನ್ ಬಿ.ಎಲ್. ಗೌಡರು ತೀವ್ರವಾಗಿ ಈ ಬಗ್ಗೆ ನನ್ನ ಗಮನವನ್ನು ಸೆಳೆದಿದ್ದಾರೆ. ಆದರೆ ವಾಸ್ತವವಾಗಿ ಹೇಳುವುದಾದರೆ, ಸದ್ಯದಲ್ಲಿ ಕ್ಷಾಮವೆಂಬುದು ಎಲ್ಲಿಯೂ ಇಲ್ಲ. ಅಭಾವವಿದೆ ಅಷ್ಟೇ. ಅದೂ ಉತ್ತರ ಕರ್ನಾಟಕದ ಕೆಲವು ಭಾಗಗಳಾದ ಬಿಜಾಪುರ ಜಿಲ್ಲೆ, ಧಾರವಾಡ ಜಿಲ್ಲೆಯ ಕೆಲವು ತಾಲ್ಲೂಕುಗಳು, ಬೆಳಗಾಂ ಜಿಲ್ಲೆಯ ಕೆಲವು ಭಾಗಗಳು, ಗುಲ್ಬರ್ಗ ಜಿಲ್ಲೆಯ ಕೆಲವು ಭಾಗಗಳು, ರಾಯಚೂರು ಬಳ್ಳಾರಿ ಜಿಲ್ಲೆಗಳ ಕೆಲವು ಭಾಗಗಳು ಮಾತ್ರ ಅಭಾವ ಪರಿಸ್ಥಿತಿ ದೆಶೆಗೀಡಾಗಿವೆ. ಇತ್ತ ಚಿತ್ರದುರ್ಗ, ತುಮಕೂರು, ಕೋಲಾರ ಜಿಲ್ಲೆಗಳಲ್ಲಿ ಕ್ಷಾಮಕ್ಕೂ ಸುಭಿಕ್ಷಕ್ಕೂ ಹೆಚ್ಚು ವ್ಯತ್ಯಾಸ ಎಂದೂ ಇಲ್ಲ. ಏಕೆಂದರೆ ಅಭಾವ ಪರಿಸ್ಥಿತಿಯೆನ್ನುವಾಗ ಒಂದು ಮಳೆ ಬಂತೆಂದರೆ ಸುಭಿಕ್ಷವಾಗುತ್ತದೆ. ನಾನೂ ಬಿ.ಎಲ್. ಗೌಡರೂ – ಇಬ್ಬರೂ ಕ್ಷಾಮ ಪ್ರದೇಶದಿಂದಲೇ ಬರುತ್ತಿದ್ದೇವೆ. ನಮ್ಮಿಬ್ಬರಲ್ಲಿ ಯಾರನ್ನು ನೋಡಿದರೂ ಕ್ಷಾಮದ ದೇಶದಿಂದ ಬರುವಂತೆ ಕಾಣುವುದಿಲ್ಲ. ಬಹುಶಃ ನಾವೇ ಅಲ್ಲಿನ ಕ್ಷಾಮಕ್ಕೆ ಕಾರಣರೋ ಎಂಬಂತೆ ನಾವಿದ್ದೇವೆ. ಆದರೂ ನಮಗೆ ಅಲ್ಲಿನ ಅನುಭವವಿದೆ. ಆ ಪ್ರದೇಶದಲ್ಲಿ ಕ್ಷಾಮ ಪದೇ ಪದೇ ಬರುತ್ತದೆ. ವರ್ಷೇ ವರ್ಷೇ ಆಷಾಡ ಮಾಸದಲ್ಲಿ ಕ್ಷಾಮದ ಪರಿಸ್ಥಿತಿಗಳು ಅಲ್ಲಿ ತಲೆದೋರುತ್ತಿರುತ್ತವೆ. ನಾನು ಕೆಲವು ವರ್ಷಗಳು ಕೇಂದ್ರ ಸರ್ಕಾರದಲ್ಲಿ ಮಂತ್ರಿಯಾಗಿದ್ದೆ. ಕ್ಷಾಮವು ನನ್ನ ಆಡತಳಿತದಲ್ಲೇ ಇತ್ತು. ಆದರಿಂದ ಬಂದಿರುವ ಅನುಭವದಿಂದ ನಾನು ಹೇಳುತ್ತಿದ್ದೇನೆ. ಆಷಾಡಮಾಸದಲ್ಲಿ ಈ ಭಾಗದಲ್ಲಿ ಕ್ಷಾಮದ ಚಿಹ್ನೆಗಳು ತಲೆದೋರುತ್ತವೆ. ಒಂದು ಮಳೆ ಬಂತೆಂದರೆ ಎಲ್ಲಾ ಸರಿಹೋಗುತ್ತದೆ. ನಮ್ಮ ರೈತರ ಸ್ವಭಾವವೂ ಕೂಡ ಯಾವಾಗಲೂ ಕೈಯೊಡ್ಡುವುದೇ. ಆದ್ದರಿಂದ ಅಲ್ಲಿ ಕ್ಷಾಮ–ಸುಭಿಕ್ಷ ಎರಡೂ ಉತ್ತರ ಕರ್ನಾಟಕದ ಬೆಳಗಾಂ, ಬಿಜಾಪುರ, ಧಾರವಾಡ ಮತು ಗುಲ್ಬರ್ಗಗಳಲ್ಲಿ ಈಗಾಗಲೆ ಅನೇಕ ರೀಲೀಫ್ ಕಾಮಗಾರಿಗಳು ನಡೆಯುತ್ತಿವೆ. ಬಿಜಾಪುರದಲ್ಲಿ ಅಂತೂ ಹದಿನಾಲ್ಕು ದೊಡ್ಡ ದೊಡ್ಡ ಕೆರೆಗಳ ಕೆಲಸ ನಡೆಯುತ್ತಿದೆ. ಸುಮಾರು ಹತ್ತು ಲಕ್ಷ ರೂಪಾಯಿಗಳನ್ನು ಈ ನಾಲ್ಕು ಡಿವಿಜನ್‌ಗಳಲ್ಲಿ ರಿಲೀಫ್ ವರ್ಕ್ಸ್ ನಡೆಸುವ ಬಗ್ಗೆ ಇಟ್ಟಿದ್ದೇವೆ. ಇದರ ಜೊತೆಗೆ ತಕ್ಕಾವಿ ಲೋನ್‌ಗಳನ್ನು ಕೂಡ ಉದಾರವಾಗಿ ಕೊಡುತ್ತಿದ್ದೇವೆ.

ಈಗ ಬಂದಿರುವ ಸೂಚನೆಗಳ ಪ್ರಕಾರ ತುಮಕೂರಿನ ಕೆಲವು ಭಾಗಗಳನ್ನು, ಅದರಲ್ಲೂ ನಮ್ಮ ಮಾನ್ಯ ಮುಕ್ಕಣ್ಣಪ್ಪನವರ ಕ್ಷೇತ್ರವಾದ ಸಿರಾದಲ್ಲಿ, ಬೆಳಗಾಂನ ಕೆಲವು ಭಾಗಗಳಲ್ಲಿ ಅಭಾವ ಪರಿಸ್ಥಿತಿ ಇದೆ ಎಂದು ತಿಳಿದು ಬಂದಿದೆ. ಹಾಗೇ ಚಿತ್ರದುರ್ಗದ ಕೆಲವು ಭಾಗಗಳಲ್ಲಿ ಇಂತಹ

ಪರಿಸ್ಥಿತಿ ಇದೆ. ಕೆಲವು ಮಾನ್ಯ ಸದಸ್ಯರುಗಳು ಈಗ ಏಳೆಂಟು ದಿವಸಗಳ ಹಿಂದೆ ನನಗೆ ಬಂದು ಹೇಳಿದರು. ಅಲ್ಲಿ ಸುಮಾರು ಎಪ್ಪತ್ತೈದು ಸಾವಿರ ರೂಪಾಯಿಗಳಷ್ಟು ಹಣವನ್ನು ಈಗಾಗಲೇ ಕೊಟ್ಟಿದೆ. ಅದರಂತೆ ರಿಲೀಫ್ ವರ್ಕುಗಳೂ ಆ ಪ್ರಕಾರ ಆಗುತ್ತಿವೆ. ಇನ್ನೂ ಹೆಚ್ಚಾಗಿ ಆಗಬೇಕೆಂದು ಮಾನ್ಯ ಸದಸ್ಯರು ಈಗ ಹೇಳುತ್ತಿದ್ದಾರೆ. ಸದ್ಯದಲ್ಲೇ ನಮ್ಮ ಮುಖ್ಯಮಂತ್ರಿಗಳು ಆ ಕಡೆ ಹೋಗುತ್ತಿರುವುದರಿಂದ, ಅಲ್ಲಿಗೆ ಹೋಗಿ, ಪರಿಸ್ಥಿತಿಯನ್ನು ತಿಳಿದುಕೊಂಡು ಏನು ಹೇಳುತ್ತಾರೋ ನೋಡಿಕೊಂಡು ಅದಕ್ಕೆ ತಕ್ಕ ಕೆಲಸ ಕಾರ್ಯಗಳನ್ನು ಮಾಡಲು ಏರ್ಪಾಡು ಮಾಡುತ್ತೇವೆ. ನಮ್ಮ ಕೇಂದ್ರ ಸರಕಾರದವರು ಸಾಕಾದಷ್ಟು ಹಣಕಾಸಿನ ಸಹಾಯ ಮಾಡುತ್ತಾರೆ. ನಮ್ಮ ಸರಕಾರಕ್ಕೂ ಸಾಧ್ಯವಾದಷ್ಟು ಮಾಡಲು ಶಕ್ತಿ ಇದೆ. ಆದರೆ ಇಲ್ಲಿ ಜನಗಳಿಗೆ ಅಭಾವದಿಂದ ತೊಂದರೆಯಾಗಿದೆ ಎಂದು ಅಂಥ ಕ್ಷಾಮ–ಡಾಮರಗಳು ಬಂದು ಉಪವಾಸದಿಂದ ಸಾಯುವ ಸ್ಥಿತಿ ಬಂದಿಲ್ಲ. ಇಷ್ಟು ಮಾತ್ರ ಹೇಳಬಲ್ಲೆ. ಹಾಗೇನಾದರೂ ಇದ್ದರೆ ಅದಕ್ಕೆ ತಕ್ಕ ಕಾರ್ಯಕ್ರಮ ತೆಗೆದುಕೊಳ್ಳುತ್ತೇವೆ. ಅದರಲ್ಲೇನೂ ಅನುಮಾನವಿಲ್ಲ. ರಿಲೀಫ್ ವರ್ಕ್ಸ್‌ಗಳನ್ನು ತೆಗೆದುಕೊಳ್ಳುತ್ತೇವೆ. ಆದಷ್ಟು ಸೂಕ್ತವಾದ ವ್ಯವಸ್ಥೆಗಳನ್ನು ಒದಗಿಸಿಕೊಡುತ್ತೇವೆ.

ಇಷ್ಟನ್ನು ಹೇಳಿ ಇಲ್ಲಿ ನಮ್ಮ ಇಲಾಖೆಯ ಬಗ್ಗೆ ಅಷ್ಟಾಗಿ ಟೀಕೆ ಮಾಡಿಲ್ಲ. ನಮ್ಮ ಇಲಾಖೆಯ ಬಗ್ಗೆ ಬಹಳ ಮಮತೆಯಿಂದಲೂ, ಪ್ರೀತಿಯಿಂದಲೂ, ವಿಶ್ವಾಸದಿಂದಲೂ ಮಾತನಾಡಿದ್ದಾರೆ. ಇದರಲ್ಲಿ ಲ್ಯಾಂಡ್ ರಿಫಾರಂಸ್ ಆ್ಯಕ್ಟ್ ಜಾರಿಗೆ ಬೇಗನೆ ತರಬೇಕೆಂದು ಮಾನ್ಯ ಸದಸ್ಯರು ಹೇಳಿದರು. ಇದಕ್ಕೆ Constitutional difficulty ಬಂದಿದೆ. ಈ ಬಗ್ಗೆ ಮೇಲ್ಮನೆಯಲ್ಲೂ ಕೂಡ ಈಗಾಗಲೇ ಉತ್ತರ ಕೊಟ್ಟಿದ್ದೇನೆ. ಇದನ್ನು ಬರುವ ವರ್ಷದ ಫೆಬ್ರವರಿ–ಮಾರ್ಚ್ ತಿಂಗಳ ಒಳಗಾಗಿ ಈ ಕಾನೂನನ್ನು ಜಾರಿಗೆ ತರಬಹುದು ಎಂದು ಆಗಲೇ ಉತ್ತರ ಹೇಳಿದ್ದೇನೆ. ನಮ್ಮ ರೆವೆನ್ಯೂ ಇಲಾಖೆಯ ಬಗ್ಗೆ ಅನೇಕ ಸದಸ್ಯರುಗಳು ಕೆಲವು ಸಲಹೆಗಳನ್ನು ಕೊಟ್ಟರು. ರೆವೆನ್ಯೂ ಇಲಾಖೆ ಎನ್ನುವುದು–

> "The Revenue Department is known as the mother of all the Departments. Unfortunately the mother seems to have beocme so old that the father has started neglecting her and he has thought of a second wife. That second wife is the Development Department.

ರೆವೆನ್ಯೂ ಇಲಾಖೆಯಲ್ಲಿ ಸ್ಥಳದಲ್ಲೇ ಇರುವ ಅಧಿಕಾರಿಗಳು ಎಂದರೆ ಅಮಲ್ದಾರರುಗಳು. ಆದರೆ ಇವರ ವಾಸಕ್ಕೆ ಮನೆ ಇಲ್ಲ. ಬೇರೆ ಎಲ್ಲಾ ಅಧಿಕಾರಿಗಳಿಗೂ ಮನೆಗಳಿವೆ. ಸ್ಥಳದಲ್ಲಿದ್ದು ಹೆಚ್ಚಾಗಿ ಕಾರ್ಯವನ್ನು ಮಾಡುವವರು ಅಮಲ್ದಾರರುಗಳು. ಇವರಿಗೆ ಮನೆ ಇಲ್ಲ. ವಿಲೇಜು ಲೆವೆಲ್ ವರ್ಕರುಗಳಿಗೆ, ಬಿ.ಡಿ.ಓ.ಗಳಿಗೆ ಮನೆಗಳಿವೆ. ಅವರಿಗೆ ಜೀಪುಗಳಿವೆ. ಆದರೆ ಇವರಿಗೆ ಇಲ್ಲ. ಬಹುಶಃ ಮೊದಲನೆಯ ಹೆಂಡತಿಯಲ್ಲಿ ವಿಶ್ವಾಸವಿಲ್ಲದೆ, ಎರಡನೇ ಹೆಂಡತಿಯಲ್ಲಿ ವಿಶ್ವಾಸವಿಟ್ಟು ಏನೇನು ಮಾಡಬೇಕೋ ಅದನ್ನು ಮಾಡುತ್ತಿದ್ದಾರೆ. ಒಂದು ತಾಲ್ಲೂಕಿನಲ್ಲಿ ಮುಖ್ಯಸ್ಥರಾಗಿ ಜನತೆಗೆ

ಎಷ್ಟೋ ಕೆಲಸಗಳನ್ನು ಮಾಡುವವರು ಮುಖ್ಯವಾಗಿ ಅಮಲ್ದಾರರುಗಳು. ಒಬ್ಬರು ನ್ಯಾಯವಾಗಿ ತಾಲೂಕು ಲೆವೆಲಿನಲ್ಲಿ ಕೆಲಸ ಮಾಡುವ ಜಿಲ್ಲಾಧಿಕಾರಿಗಳು ಬಹಳ ದಕ್ಷರೂ, ಆಡಳಿತ ಅನುಭವವನ್ನು ಪಡೆದಿರುವವರು ಸ್ವಲ್ಪ ಮಮತೆಯಿಂದ, ಕರುಣೆಯಿಂದ ಜನರಲ್ಲಿರುವವರು ಇದ್ದರೆ ಮಂತ್ರಿಗಳ್ಯಾರೂ ಸಾಮಾನ್ಯ ಜನರಿಗೆ ಬೇಕಾಗುವುದಿಲ್ಲ. ನಮ್ಮ ರಾಜ್ಯದಲ್ಲಿರವ ಅಮಲ್ದಾರರುಗಳು ಪ್ರೀತಿಯಿಂದ ಜನಗಳೊಡನೆ ವರ್ತಿಸುತ್ತಿದ್ದಾರೆ ನೂರರಲ್ಲಿ ತೊಂಬತ್ತರಷ್ಟು ಜನ ಬಹಳ ವ್ಯತ್ಯಾಸವುಳ್ಳವರಾಗಿರುತ್ತಾರೆ. ಹಾಗೆ ಎಷ್ಟೋ ಕಡೆ ಅಮಲ್ದಾರರಗಳು ಕೆಲಸ ಮಾಡಿದರೆ ಬಹಳ ಸಂತೋಷವಾಗುತ್ತದೆ. ಹಿಂದಿನ ಕಾಲದಲ್ಲಿ ಜನ ಅಮಲ್ದಾರರು ಕುದುರೆಯ ಮೇಲೆ ಏರಿ ಬರುತ್ತಿರುವುದನ್ನು ನೋಡಿ ಬಹಳ ಸಂತೋಷ ಪಡುತ್ತಿದ್ದರು. ಅದರಲ್ಲೂ ಕೆಲವು ಜನ ಕುದುರೆಯ ಕಾಲಿನಿಂದ ತುಳಿಸಿಕೊಂಡು ನೋವಾದರೂ, ಅವರನ್ನು ನೋಡಿ ನಗುತ್ತಾ ಹೋಗುತ್ತಿದ್ದರು. ಅಂತಹ ಕಾಲ ಇತ್ತು. ಈಗ ಕಾಲ ಬದಲಾಗಿದೆ.

* * * * *

# ಮೈಸೂರು ಲ್ಯಾಂಡ್ ರೆವಿನ್ಯೂ ಬಿಲ್

## 1962

ಮಾನ್ಯ ಕಂದಾಯ ಸಚಿವರಾದ ಶ್ರೀ ಎಂ.ವಿ. ಕೃಷ್ಣಪ್ಪ ಅವರು ಮೈಸೂರು ರಾಜ್ಯದ ಕಂದಾಯ ಪದ್ಧತಿಯಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿದರು. ದೇಶ ಚೀನದೊಡನೆ ಯುದ್ಧದ ಪರಿಸ್ಥಿತಿ ಎದುರಿಸುತ್ತಿದ್ದ ಸಂದರ್ಭ. ಆರ್ಥಿಕವಾಗಿ ಸಂಕಷ್ಟಗಳನ್ನು ಎದುರಿಸುತ್ತಿತ್ತು. ಬೇಸಾಯದ ಭೂಮಿಗೆ ಸಂಬಂಧಿಸಿ ತೆರಿಗೆಗಳಲ್ಲಿ ಬದಲಾವಣೆ ಮಾಡಿದ ಬಿಲ್‌ನ್ನು 'ವಿಧಾನಸಭೆ' ಸಂಪೂರ್ಣವಾಗಿ ಅಂಗೀಕರಿಸಿ ಹೊಗಳಿತು. ಹಾಗೆಯೇ ಮೇಲ್ಮನೆಯಾದ ವಿಧಾನಪರಿಷತ್‌ನಲ್ಲಿ ಒಪ್ಪಿಗೆಗಾಗಿ ಮಂಡಿಸಿದ ಬಿಲ್ ಇಂತಿದೆ:

**ಶ್ರೀ ಎಂ.ವಿ. ಕೃಷ್ಣಪ್ಪ (ಕಂದಾಯ ಶಾಖೆ ಮಂತ್ರಿಗಳು):** ಮಾನ್ಯ ಅಧ್ಯಕ್ಷರೆ, ಈ ಮೈಸೂರು ಲ್ಯಾಂಡ್ ರೆವಿನ್ಯೂ ಸರ್ಚಾರ್ಜ್ ಬಿಲ್ಲು ಅಸೆಂಬ್ಲಿಯಲ್ಲಿ ಸರ್ಕಾರದವು ಮಾತ್ರ ತಂದ ಕೆಲವು ತಿದ್ದುಪಡಿಗಳಿಂದ ಸಂಪೂರ್ಣ ಒಪ್ಪಿಗೆ ಪಡೆದಿದೆ. ಈ ಕಂದಾಯವನ್ನು ರೈತರ ಮೇಲೆ ಹೊರಿಸುವಾಗ ನಾವು ಬೇರೆ ಯಾವ ಮಾರ್ಗವೂ ಇಲ್ಲದೆ, ಹೊರಿಸಬೇಕಾಗಿದೆ. ಈ ಬಿಲ್ಲು ಸುಮಾರು 4–5 ತಿಂಗಳ ಹಿಂದೆಯೇ ತಯಾರಾಗಿದ್ದಿತು. ಸಾಧ್ಯವಿದಷ್ಟು ಎಲ್ಲ ಮಾರ್ಗಗಳನ್ನೂ ಅನುಸರಿಸಿ, ಸರಕಾರಕ್ಕೆ ಹೆಚ್ಚಾಗಿ ಹಣ ಯಾವ ಯಾವ ಮಾರ್ಗಗಳಿಂದ ಬರುತ್ತದೆಯೋ ಅದನ್ನೆಲ್ಲ ಅನುಸರಿಸಿ, ಕಡೆಯದಾಗಿ ಅವಶ್ಯಕತೆ ಇದ್ದರೆ ಮಾತ್ರ ಈ ರೆವಿನ್ಯೂ ಸರ್‌ಚಾರ್ಜ್‌ನ್ನು ಹಾಕೋಣ ಎಂದು ನಾಲ್ಕೈದು ತಿಂಗಳು ಮುಂದೆ ಹಾಕುತ್ತಲೇ ಬಂದಿದ್ದೇವೆ. ಈಗ ದೇಶದಲ್ಲಿ ಬಂದಿರುವ ತುರ್ತು ಪರಿಸ್ಥಿತಿಯ ಮೂಲಕ ಸರಕಾರಕ್ಕೆ ಹಣ ಬೇಕಾಗಿದೆ ಎನ್ನುವುದು ಮಾನ್ಯ ಸದಸ್ಯರೆಲ್ಲರಿಗೂ ಗೊತ್ತಿದೆ. ಮೂರನೆ ಪಂಚವಾರ್ಷಿಕ ಯೋಜನೆಗೆ 250 ಕೋಟಿ ರೂಪಾಯಿ ಖರ್ಚು ಮಾಡಬೇಕಾಗಿದೆ. ಇದು ಸಾಲದು ಎಂದು 300 ಕೋಟಿ ಮಾಡಬೇಕೆಂಬ ಪ್ರಯತ್ನ ಇದೆ. ಅನೇಕ ಯೋಜನೆಗಳಿಗೆ ಈ ಹಣ ಬೇಕಾಗಿದೆ. ಒಂದು ವರ್ಷಕ್ಕೆ 50 ಕೋಟಿ ಖರ್ಚು ಮಾಡುತ್ತಾ ಬರಬೇಕಾಗುತ್ತದೆ. 1962–63ನೇ ಸಾಲಿಗೆ 42 ಕೋಟಿ ರೂಪಾಯಿ ಯೋಜನೆ ತಯಾರಾಗಿದೆ. ಇದರಲ್ಲಿ ಕೇಂದ್ರ ಸರಕಾರ 23 ಕೋಟಿಯನ್ನು ಕೊಡುತ್ತಾರೆ. ಉಳಿದ 19 ಕೋಟಿಯನ್ನು ಏನಾದರೂ ಮಾಡಿ ನಮ್ಮ ರಿಸೋರ್ಸ್‌ನಿಂದ ಸರಿ ಪಡಿಸಿಕೊಳ್ಳಬೇಕಾಗಿದೆ. ಈಗಿನ ಅಂದಾಜು ಪ್ರಕಾರ $11^1/_2$ ಕೋಟಿ ಆದಾಯ ಬರಬಹುದು ಮತ್ತು $7^1/_2$ ಕೋಟಿ 8 ಕೋಟಿ ಕಡಿಮೆ ಬೀಳುತ್ತದೆಂದು ಲೆಕ್ಕ ಹಾಕಿದ್ದೇವೆ. ಕೇಂದ್ರ ಸರಕಾರದಿಂದ ಹೆಚ್ಚು ಪಡೆಯುವುದಕ್ಕೆ ಪ್ರಯತ್ನ ನಡೆದಿದೆ. ಆದರೆ ಯುದ್ಧ ಪರಿಸ್ಥಿತಿಯ ಮೂಲಕ ಈಗ ಕೇಂದ್ರದಿಂದ ನಮಗೆ ಸಹಾಯ ದೊರೆಯುವ ಆಶೆಯಿಲ್ಲ. ಆದುದರಿಂದ ನಮ್ಮ ರಾಜ್ಯದಲ್ಲಿಯೇ ಸಾಧ್ಯವಿರುವ ಮಾರ್ಗದಲ್ಲಿ ಸಹಾಯ ಪಡೆಯುವ ದೃಷ್ಟಿಯಿಂದ ಈ ಬಿಲ್ಲನ್ನು ತರಬೇಕಾಯಿತು. 8 ಕೋಟಿ ಕಡಿಮೆ ಬೀಳುವ ಇದರಲ್ಲಿ ಈಗ ಕಂದಾಯದಿಂದ 4 ಕೋಟಿ 8 ಲಕ್ಷ ತರಬೇಕು, ಅದರಲ್ಲಿ $3–3^1/_2$ ಕೋಟಿ ವಸೂಲಾಗುತ್ತದೆ. ಈ ಸರ್‌ಚಾರ್ಜ್‌ನಿಂದ 4 ಕೋಟಿ ಬರಬಹುದೆಂದುಕೊಂಡಿದ್ದೇವೆ.

5 ಎಕರೆಗಿಂತ ಕಡಿಮೆ ಇರುವ ಡ್ರೈಲ್ಯಾಂಡ್ಸ್‌ಗೆ ಅನ್ವಯಿಸಕೂಡದು ಎಂದು ಈ ತಿದ್ದುಪಡಿ ತಂದಿದ್ದೇವೆ. ಇದರಿಂದ ಶೇಕಡ 50 ರಷ್ಟು ರೈತರು ಹೊರಟು ಹೋಗುತ್ತಾರೆ. ಮೂರು ನಾಲ್ಕು ಎಕರೆ ಅರ್ಧ ಎಕರೆ ಭೂಮಿಯನ್ನು ಇಟ್ಟುಕೊಂಡಿರುವ ಬಡರೈತರು ನಮ್ಮ ದೇಶದಲ್ಲಿ ಹೆಚ್ಚಾಗಿದ್ದಾರೆ. Only 2 million acres of our land irrigated, 94 percent of our land unirrigated. ಭೂಸುಧಾರಣೆ ಕಾನೂನು ಮೂಲಕ ಸೀಲಿಂಗು ಬರುತ್ತದೆಂದು ಅನೇಕರು ಭೂಮಿಯನ್ನು ಹಂಚಿಬಿಟ್ಟಿದ್ದಾರೆ. ಚಿಕ್ಕ ಚಿಕ್ಕ ಹಿಡುವಳಿಗಳಿಗೆ ಅಂದರೆ 5 ಎಕರೆಯವರೆಗೆ ಎಗ್ಸೆಂಪ್‌ಷನ್ ಕೊಟ್ಟಿದೆ. ಇದರಿಂದ ಬಡರೈತರಿಗೆ ತೊಂದರೆಯಾಗುವುದಿಲ್ಲ. 5 ಎಕರೆಗಿಂತ ಹೆಚ್ಚಿಗೆ ಇರತಕ್ಕ ರೈತರು ಈ ಸರ್‌ಚಾರ್ಜು ಕೊಡಬೇಕಾಗುತ್ತದೆ. ಈಗ ಲ್ಯಾಂಡ್ ರೆವಿನ್ಯೂ ಸೆಟಲ್‌ಮೆಂಟ್ ಆಗುತ್ತಾ ಇದೆ. ಈ ಕೆಲಸದಲ್ಲಿ ಶೇಕಡ 70 ಭಾಗ ಮುಗಿದಿದೆ.

ಮೈಸೂರು ಸಂಸ್ಥಾನದಲ್ಲಿ ಈ ರೆವೆನ್ಯೂ ಸೆಟಲ್‌ಮೆಂಟು ಆಗಿ 45 ವರ್ಷವಾಯ್ತು, ಕೆಲವು ಭಾಗಗಳಲ್ಲಿ 50 ವರ್ಷವಾಯಿತು. ಸೌತ್‌ಕೆನರಾ ಮತ್ತು ರಾಯಚೂರು ಜಿಲ್ಲೆಯ 2–3 ತಾಲ್ಲೂಕು ಬಿಟ್ಟು ಉಳಿದ ಕಡೆ ಸರ್ವೆ ಸೆಟಲ್‌ಮೆಂಟ ಆಗಬೇಕಾಗಿದೆ. Survey Settlement was overdue, ಇದು ಒಮ್ಮೆ ಆದ ಮೇಲೆ 30 ವರ್ಷ ಹೆಚ್ಚು ಮಾಡುವುದಿಲ್ಲ ಎಂದು ಗ್ಯಾರಂಟಿ ಕೊಟ್ಟಿರುತ್ತಾರೆ. After 30 years the Government was every right to resurvey and fix settlement. ಈಗ 70 ಭಾಗ ಸರ್ವೆ ಕೆಲಸ ಮುಗಿದಿರುವುದರಿಂದ ಉಳಿದ ಭಾಗ 30 ಭಾಗ ಕೆಲಸವನ್ನು ಬೇಗ ಮುಗಿಸುತ್ತೇವೆಂದು ಹೇಳಿದ್ದಾರೆ. ಸರ್ವೆಸೆಟಲ್‌ಮೆಂಟ್ ಆದ ತಕ್ಷಣ ಕಂದಾಯ 100–150 ಪರ್ಸೆಂಟ್ ಏರುತ್ತದೆ. ಕೆಲವು ಕಡೆ ಕಾಫಿ ತೋಟ, ತೆಂಗಿನಕಾಯಿ ತೋಟ ಇರುವ ಕಡೆ $1^1/_2$ ರೂಪಾಯಿ ಕಂದಾಯ ಕೊಡುತ್ತಿದ್ದಾರೆ. ಖುಷ್ಕಿ ಭೂಮಿ ಇದ್ದಾಗ್ಯೆ 40–50 ವರ್ಷಗಳ ಹಿಂದೆ ಈ ಕಂದಾಯ ಹಾಕಲಾಗಿದೆ. ಈಗ ಈ ಭೂಮಿ ತೋಟವಾಗಿ ಪರಿವರ್ತನೆಯಾಗಿದೆ. ಸಕ್ಕರೆ ಕಾರ್ಖಾನೆ ಬಂದಿರುವುದರಿಂದ ಅನೇಕ ಕಡೆ ಕಬ್ಬು ಬೆಳೆಯುತ್ತಿದ್ದಾರೆ. ಕಬ್ಬು ಬೆಳೆಯುತ್ತಿದ್ದರೂ ಕೂಡ ಹಿಂದಿನ ಮಾಮೂಲಿ ಕಂದಾಯ ಕೊಡುತ್ತಿದ್ದಾರೆ. ಆದ್ದರಿಂದ ಸರ್ವೆಸೆಟಲ್‌ಮೆಂಟ್ ಮಾಡಬೇಕಾಗಿದೆ. 4–5 ಲಕ್ಷ ಖುಷ್ಕಿ ಜಮೀನು ತರೀ ಜಮೀನು ಆಗಿದೆ. ಅದೇ ರೀತಿ ಬಾಗಾಯಿತು ಕೂಡ ಆಗಿದೆ. ಹಿಂದಕ್ಕೆ ಸೈಂಟಿಫಿಕ್ ಬೇಸಿಸ್ ಇಲ್ಲದೆ ಕಂದಾಯ ಹಾಕಿದ್ದಾರೆ. ಆದುದರಿಂದ 4 ಕೋಟಿ ಕಂದಾಯ ಇರುವುದು. ಸುಮಾರು 10–12 ಕೋಟಿ ಆಗುವುದರಲ್ಲಿ ಯಾವ ಅನುಮಾನವಿಲ್ಲ. ಈ ಕೆಲಸ ಮುಗಿಯಬೇಕಾದರೆ ಇನ್ನೂ ಒಂದೂವರೆ ವರ್ಷ ಬೇಕು. ಒಂದು ವರ್ಷದಲ್ಲಿ ಮುಗಿಸುತ್ತೇವೆಂದು ಹೇಳಿದ್ದಾರೆ. ಉಳಿದ ಶೇಕಡ 30 ಭಾಗ ಕೆಲಸ ಮುಗಿಸುವುದಕ್ಕೆ ಇನ್ನೂ ಅವಧಿ ಬೇಕು. ಇದಾದ ಮೇಲೆ ನ್ಯಾಯವಾದ ರೀತಿಯಲ್ಲಿ ಇನ್ನೂ ಆರು ಕೋಟಿ ರೂಪಾಯಿ ಕಂದಾಯ ಜಾಸ್ತಿ ಬರುತ್ತದೆ. ಅದುವರೆಗೂ ಇರೋಣವೆಂದು ಕ್ಯಾಬಿನೆಟ್‌ನಲ್ಲಿ ಪಾಸ್ ಮಾಡದೆ ಹಾಗೆಯೇ ಇಟ್ಟುಕೊಂಡಿದ್ದೇವು. ಈಗಿನ ತುರ್ತು ಪರಿಸ್ಥಿತಿಯಲ್ಲಿ ಬೇರೆ ಮಾರ್ಗವಿಲ್ಲದೆ ಇದನ್ನು ತರಬೇಕಾಯಿತು. ಹೆಚ್ಚು ತೆರಿಗೆ ಬರುವ ಇಲಾಖೆಗಳಲ್ಲಿ ಕೇಂದ್ರದ ಕೈಯಲ್ಲಿದೆ. ಎಲ್ಲ ತೆರಿಗೆಗಳನ್ನು ಹಾಕಿದ್ದಾಗಿದೆ.

ಇನ್ನು ಯಾವುದೂ ಉಳಿದಿಲ್ಲ. ರೈತನನ್ನು ಮುಟ್ಟಬಾರದು, ರೈತ ದೇಶದಲ್ಲಿ ಹೆಚ್ಚು ಆಹಾರ ಬೆಳೆಯಬೇಕು ಎಂದು ಇದ್ದೆವು. ಆದರೆ ಕಡೆಯದಾಗಿ ರೈತನ ಮೇಲೆಯೂ ತೆರಿಗೆಯ ಭಾರವನ್ನು ಹಾಕಬೇಕಾಗಿ ಬಂತು. ಯುದ್ಧದ ಪರಿಣಾಮವಾಗಿ ಮೂರನೆಯ ಯೋಜನೆಯಲ್ಲಿ ಆಹಾರದ ಬೆಳೆಯನ್ನು ಹೆಚ್ಚಿಸಬೇಕು, ಅದಕ್ಕಾಗಿ ಎಷ್ಟು ಹಣವನ್ನು ಇಡಲಾಗಿದೆಯೋ ಅದಕ್ಕಿಂತ ಹೆಚ್ಚು ಹಣ ಖರ್ಚಾದರೂ ದೇಶದಲ್ಲಿ ಆಹಾರದ ಉತ್ಪತ್ತಿಯಾಗಬೇಕು ಎಂದು ಕೇಂದ್ರ ಸರ್ಕಾರ ಸಂಸ್ಥಾನ ಸರ್ಕಾರಕ್ಕೆ ತಿಳಿಸಿದೆ. ಮೂರನೆಯ ಯೋಜನೆಯಲ್ಲಿ ಒದಗಿಸಿರುವ 250 ಕೋಟಿ ರೂಪಾಯಿಗಳಲ್ಲಿ 140 ಕೋಟಿ ರೂಪಾಯಿ ರೈತರ ಅಭಿವೃದ್ಧಿಗಾಗಿ major, medium and minor irrigation ಕಾರ್ಯಗಳಾಗಿ ಇದೆ. ಇದಲ್ಲದೆ ಅವರಿಗೆ ಅಪ್ರತ್ಯಕ್ಷವಾಗಿ ಸಹಾಯವಾಗುವಂತಹ power projects ಮುಂತಾದವೂ ಇದೆ. ಇಷ್ಟಾದರೂ ರೈತನಾದವನು ಕಂದಾಯ ಕೊಡುವುದನ್ನು ವಿರೋಧಿಸುತ್ತಾನೆ. ನಾನು ರೈತನ ಮನೆಯಿಂದ ಬಂದವನಾದುದರಿಂದ ಈ ತೆರಿಗೆಯನ್ನು ರೈತನ ಮೇಲೆ ಹಾಕಬಾರದೆಂದು 4–5 ತಿಂಗಳಿನಿಂದ ಮುಂದೆ ಹಾಕುತ್ತಾ ಬಂದಿದ್ದೇನೆ. ಈಗ ಬೇರೆ ಮಾರ್ಗವಿಲ್ಲ. ಸಮಾಜದಲ್ಲಿ ಶೇಕಡ 80 ಭಾಗ ರೈತರಿದ್ದಾರೆ, 20 ಭಾಗ ಬೇರೆಯವರು. ರೈತರಿಗೆ ತೆರಿಗೆಯನ್ನು ಕೊಡಲು ಕಷ್ಟವಾಗುತ್ತದೆ. ದೇಶಕ್ಕೆ ವಿಪತ್ತು ಬಂದಿರುವಾಗ ಎಲ್ಲರೂ ಕಷ್ಟ ಪಡಬೇಕು. ದೇಶದ ಹಿತದೃಷ್ಟಿಯಿಂದ ತ್ಯಾಗ ಮಾಡಬೇಕು. ಎರಡು ವರ್ಷ ಕಾಲ ಮಾತ್ರ ಈ ತೆರಿಗೆಯನ್ನು ಹಾಕಲಾಗುವುದೆಂದು ಇದರಲ್ಲಿ ಹೇಳಿದ್ದೇನೆ.

ರೈತನಿಗೆ ತನ್ನ ಕರ್ತವ್ಯ ಪಾಲನೆಯಲ್ಲಿ ಅಗ್ರಸ್ಥಾನ ಕೊಡಬೇಕು. ತನ್ನ ಮನೆಯಲ್ಲಿ ಹೆಣ್ಣು ಮಕ್ಕಳ, ಗಂಡು ಮಕ್ಕಳು ವಯಸ್ಸಿಗೆ ಬಂದವರೂ ಇದ್ದಾರೆ. ತನ್ನಲ್ಲಿ ದುಡ್ಡಿಲ್ಲದಿದ್ದರೂ ಸಾಲ ಮಾಡಿಯಾದರೂ ತನ್ನ ಕರ್ತವ್ಯ ಪಾಲನೆ ಮಾಡುವುದರಲ್ಲಿ ರೈತ ಅಗ್ರ. ಹಾಗೆಯೇ ತನ್ನ ಸಮಾಜದ ಧರ್ಮವನ್ನು ಕಾಪಾಡುವುದರಲ್ಲಿ ತನ್ನ ಕರ್ತವ್ಯ ಪಾಲನೆಗೋಸ್ಕರ ತ್ಯಾಗ ಮಾಡುವುದರಲ್ಲಿ ರೈತ ಅಗ್ರಗಣ್ಯ. ಕಷ್ಟಪಟ್ಟು ಸಾಲವಾದರೂ ಮಾಡಿ ಮದುವೆ ಮಾಡುವಂತೆ ದೇಶಕ್ಕೆ ಆಪತ್ತು ಬಂದಿರುವಾಗ ಅವನು ತ್ಯಾಗ ಮಾಡಲೇಬೇಕು. ಬೇರೆ ದೇಶಗಳಲ್ಲಿ ಕೇಳಿಕೊಳ್ಳುವ ಬಾಬತ್ತೇ ಇಲ್ಲ. ನಾನು ಚೀಣಾ ದೇಶದಲ್ಲಿ ಎರಡು ತಿಂಗಳು ಸುತ್ತಾಡಿಕೊಂಡು ಬಂದಿದ್ದೇನೆ. ಅಲ್ಲಿ ರೈತರನ್ನು ಜೈಲಿನಲ್ಲಿಟ್ಟ ಹಾಗೆ ಇಟ್ಟುಕೊಂಡಿದ್ದಾರೆ. ಬೆಳಿಗ್ಗೆ ಗಂಟೆ ಬಾರಿಸಿದಾಗ ರೈತರು ಕೆಲಸಕ್ಕೆ ಹೋಗಬೇಕು. ಮತ್ತೆ ಸಾಯಂಕಾಲ ಗಂಟೆ ಬಾರಿಸಿದಾಗ ವಾಪಸು ಬರಬೇಕು. ಕಮ್ಯೂನ್ಸ್ ಎಂದು ಮಾಡಿಕೊಂಡು common kitchens ವ್ಯವಸ್ಥೆ ಮಾಡಿರುತ್ತಾರೆ. ಸ್ವಂತ ಮನೆಯಲ್ಲಿದ್ದು, ಆಹಾರವನ್ನು ತಯಾರಿಸಿ ಊಟ ಮಾಡುವ ಹಾಗಿಲ್ಲ. ಕಮ್ಯೂನ್ಸ್ ಎಂದರೆ ಊರಿಗೆಲ್ಲ ಊಟ, ಊಟವಿಲ್ಲದೆ ಇದ್ದರೆ ಉಪವಾಸವಿರಬೇಕು. ಖೈದಿಗಳಂತೆ ಇಟ್ಟಿರುವುದಕ್ಕೆ ಕಮ್ಯೂನ್ಸ್ ಎಂದು ಹೇಳಬಹುದು. ಇಂಥ ಜನರು ನಮ್ಮ ಮೇಲೆ ದುರಾಕ್ರಮಣ ಮಾಡುತ್ತಿರುವಾಗ, ಪೂರ್ತಿ ಸ್ವಾತಂತ್ರ್ಯ ಹೊರಟುಹೋಗುವಂಥ ಪರಿಸ್ಥಿತಿ ರೈತನಿಗೆ ಬಂದಿರುವಾಗ, ರೈತರು ತ್ಯಾಗ ಮಾಡಿದರೂ ಚಿಂತೆಯಿಲ್ಲ. ನಾಲ್ಕು ಕೋಟಿ ರೂಪಾಯಿಗಳನ್ನು ದೇಶದ ರಕ್ಷಣೆಗೋಸ್ಕರ, ತನ್ನ ಸ್ವಾತಂತ್ರ್ಯ ರಕ್ಷಣೆಗೋಸ್ಕರ ಅವನ ಅಭಿವೃದ್ಧಿಗೋಸ್ಕರ ತೆರಿಗೆಯ ರೂಪದಲ್ಲಿ ಕೊಡಲಿ ಎಂದು ಈ ಮಸೂದೆಯನ್ನು ತಂದಿದ್ದೇನೆ.

ಮೈಸೂರು ಸರ್ಕಾರದವರು 40 ಕೋಟಿ ರೂಪಾಯಿ ವೆಚ್ಚದ ಒಂದು ಅಡಿಷನಲ್ ಪ್ಲಾನ್ ತಯಾರು ಮಾಡಿದ್ದೇವೆ. ಕೇಂದ್ರ ಸರ್ಕಾರದ ಅಧಿಕಾರಿಗಳು ಮದ್ರಾಸಿಗೆ ಬಂದಿದ್ದಾಗ ಅವರ ಮುಂದೆ ನಮ್ಮ ಪ್ಲಾನ್ ಅವರಿಗೆ ತಿಳಿಸಿದ್ದೇವೆ. ಮೈನರ್ ಇರಿಗೇಷನ್ನಿಗೆ 16 ಕೋಟಿ ರೂಪಾಯಿಗಳನ್ನು ಕೊಟ್ಟಿದ್ದರು. ಈಗ ಪುನಃ 16 ಕೋಟಿ ರೂಪಾಯಿಗಳನ್ನು ಕೇಳಿದ್ದೇವೆ. ಬಾವಿಗಳಿಗೆ 9 ಕೋಟಿ ರೂಪಾಯಿ ಕೇಳಿದ್ದೇವೆ. 40 ಸಾವಿರ ಬಾವಿಗಳಿಗೆ ಮೂರು ಸಾವಿರ ರೂಪಾಯಿ ಪ್ರಕಾರ ಮುಂದಿನ ಮೂರು ವರ್ಷಗಳಲ್ಲಿ ಕೊಡುವುದಲ್ಲದೆ, ಎರಡು ಸಾವಿರ ಪಂಪ್‌ಸೆಟ್‌ಗಳಿಗೆ ಅದೇ ಬಾವಿಯ ಮೇಲೆ surtey ಮೇಲೆ ಕೊಡುತ್ತ ಇದ್ದೇವೆ. ಇಂಡಿಯಾ ಸರ್ಕಾರದವರು ನಮ್ಮ ಯೋಜನೆಯನ್ನು ಒಪ್ಪಿಕೊಳ್ಳುವ ಸ್ಥಿತಿಯಲ್ಲಿದ್ದಾರೆ. ಮೈನರ್ ಇರಿಗೇಷನ್ನಿಗೆ ಧಾರಳವಾಗಿ ಕೊಡುತ್ತಾರೆ. 40 ಕೋಟಿ ರೂಪಾಯಿ ಪ್ಲಾನ್ ಬಂದಾಗ ಅದರಿಂದ ಬಹಳ ಅನುಕೂಲವಾಗುತ್ತದೆ.

ದೇಶಕ್ಕೆ ಕಷ್ಟ ಬಂದಿರುವಾಗ ರೈತನು ತಾನು ಕೊಡುವ ಕಂದಾಯದಲ್ಲಿ ಹೆಚ್ಚಾಗಿ ಕೊಟ್ಟರೆ, ನಾಲ್ಕು ಕೋಟಿ ರೂಪಾಯಿ ಸೇರಿಸಿದರೆ ಅದರಿಂದ ಪಾಪವಾಗುವುದಿಲ್ಲ. ರೈತನಿಗೆ ಇವತ್ತು ಕಷ್ಟವಿದೆ. ಬೆಂಗಳೂರು, ಮೈಸೂರು ಇಂಥ ನಗರಗಳಲ್ಲಿ ಹೊಸ ಹೊಸ ಮನೆಗಳನ್ನು ನೋಡುತ್ತೇವೆ. ಹಳ್ಳಿಗಳಲ್ಲಿ ಹಳೆಯ ಮನೆಗಳು ಹಾಗೆಯೇ ಇವೆ. ಯಾರೋ ಕೆಲವರು Middle class farmers ಸ್ವಲ್ಪ ಚೆನ್ನಾಗಿದ್ದಾರೆ. ಅವರ ಮೇಲೆ ಈ ತೆರಿಗೆ ಬೀಳುತ್ತದೆ. 5 ಎಕರೆ ಮೇಲ್ಪಟ್ಟು ಇರುವ ಜಮೀನುದಾರರಿಗೆ ಈ ತೆರಿಗೆ ಬೀಳುತ್ತದೆ. ಬಡವರ ಮೇಲೆ, 5 ಎಕರೆಗಿಂತ ಕಡಿಮೆ ಜಮೀನುದಾರರಿಗೆ ಇಲ್ಲಾ ಬಡ ಬೋರೇಗೌಡನನ್ನು ನಾವು ಮುಟ್ಟಿಲ್ಲ. ಇದು ದೊಡ್ಡ ಬಲೆ. ಅದರೊಳಗೆ ಚಿಕ್ಕ ಮೀನುಗಳು ಬೀಳದೆ ದೊಡ್ಡ ಮೀನುಗಳು ಮಾತ್ರ ನಮ್ಮ ಬಲೆಗೆ ಸಿಕ್ಕುತ್ತವೆ. ದೇಶದ ಬೆನ್ನುಮೂಳೆಯಾಗಿರುವ ರೈತನ ಮೇಲೆ ಏನೂ ಹೊರೆಯಾಗಬಾರದು ಎನ್ನುವ ದೂರದೃಷ್ಟಿಯಿಂದ ಈ ಬಿಲ್ಲನ್ನು ಈ ಸಭೆಯ ಮುಂದೆ ತಂದಿದ್ದೇನೆ. ಇದನ್ನು ಒಪ್ಪುತ್ತಾರೆಂದು ಆಶಿಸುತ್ತೇನೆ.

* * * * *

# ಭೂಕಂದಾಯ ಮಸೂದೆ*

## 1962

**ಭಾರತದೇಶ ಯುದ್ಧ ಸ್ಥಿತಿಯನ್ನು ಎದುರಿಸುತ್ತಿರುವ ಸಂದರ್ಭದಲ್ಲಿ ಆರ್ಥಿಕ ಸಂಕಷ್ಟಕ್ಕೆ ಗುರಿಯಾಗುವಂತದ್ದು. ಶ್ರೀ ಎಂ.ವಿ. ಕೃಷ್ಣಪ್ಪ ಅವರು ರಾಜ್ಯದ ಕಂದಾಯ ಸಚಿವರಾಗಿ ರೈತರಿಂದ 'ಕಂದಾಯ' ಪಡೆಯುವ ಹೊಸ ಮಸೂದೆಯನ್ನು ಮಂಡಿಸಿದರು. ಅದಕ್ಕೆ ಸಂಬಂಧಿಸಿದ ಚರ್ಚೆ**

ಶ್ರೀ ಎಂ.ವಿ. ಕೃಷ್ಣಪ್ಪ – ನಾನು ಪ್ರಾರಂಭದಲ್ಲಿ ವಾದವಿವಾದಗಳಿಗೆ ಹೋಗಬೇಕಾಗಿಲ್ಲ. ಹೀಗೆ ಮಾಡಿ ಚರ್ಚೆಯನ್ನು ಜಾಸ್ತಿಮಾಡಿಕೊಳ್ಳುವುದಕ್ಕಿಂತ ಈ ತುರ್ತು ಪರಿಸ್ಥಿತಿಯಲ್ಲಿ ದೇಶಕ್ಕೆ ಸಾಧ್ಯವಾದಷ್ಟು ಹಣ ಬೇಕಾಗಿದೆಯೆಂದು ಹೇಳುತ್ತೇನೆ. ಹೀಗಿರುವಾಗ, ಅದರಲ್ಲಿಯೂ ಈ ಬಾಬಿನಲ್ಲಿ ಹತ್ತು ಹನ್ನೆರಡು ವರ್ಷಗಳಿಂದೀಚೆಗೆ ಉತ್ಪತ್ತಿ ಮೂರುವರೆ ಕೋಟಿ ರೂಪಾಯಿಗಳ ಮೇಲೆ ಬಂದಿಲ್ಲ. ಶ್ರೀಮಾನ್ ಮಲ್ಲಾರಾಧ್ಯರು ನಗರಗಳಿಗೆ ಸೇಲ್ಸ್ ಟ್ಯಾಕ್ಸ್ ಹೆಚ್ಚು ಬೀಳುತ್ತಿದೆಯೆಂದು ಹೇಳಿದರು. ಈ ಕಡೆ ಹಳ್ಳಿಯವರಿಗೂ ಬೀಳುತ್ತದೆ. ಶೇಕಡ 80ರಷ್ಟಿರುವ ಹಳ್ಳಿಯವರಿಗೆ ತೆರಿಗೆ ಬೀಳುವ ಮಸೂದೆ ಇದೆ. ಈ ತುರ್ತು ಪರಿಸ್ಥಿತಿಯಲ್ಲಿ ಎಲ್ಲರೂ ತ್ಯಾಗಕ್ಕೆ ಸಿದ್ಧರಾಗಿ ಮಾಡುತ್ತಾರೆಂಬ ದೃಷ್ಟಿಯಿಂದ ನಾನು ವಾದಕ್ಕೆ ಹೋಗಲಿಲ್ಲ. ಆದರೆ ಸದಸ್ಯರು ಬುದ್ಧಿವಂತರು, ಅವರಲ್ಲಿಯೇ ವಾದಕ್ಕೆ ಉತ್ತರವನ್ನೂ ಕೊಟ್ಟಿದ್ದಾರೆ. ಶ್ರೀಮಾನ್ ಮಲ್ಲಾರಾಧ್ಯರು ತಮ್ಮ ಅನುಭವದಿಂದ ಮಾತನಾಡಿದುದಕ್ಕೆ ಶ್ರೀಮಾನ್ ಆಚಾರ್ಯರು ಉತ್ತರ ಕೊಟ್ಟಿದ್ದಾರೆ. ಅವರು ಉತ್ತರ ಮಾಡುವಾಗ, ಇನ್ನೂ ಕೆಲವು ಜನ ಆಚಾರ್ಯರು ಪಾರ್ಲಿಮೆಂಟಿನಲ್ಲಿಯೇ ಇದ್ದು ಶ್ರೀಮಾನ್ ಮಲ್ಲಾರಾಧ್ಯರೂ ಅಲ್ಲಿಗೆ ಹೋಗಿದ್ದಿದ್ದರೆ ಚೆನ್ನಾಗಿತ್ತು ಎಂದು ನನಗನಿಸಿತು. ಅಂತೂ ಬಹಳ ಚೆನ್ನಾಗಿ ವಾದವಿವಾದವನ್ನು ನಡೆಸಿದ್ದಾರೆ. ಇವರು ಪಾರ್ಲಿಮೆಂಟಿನಲ್ಲಿದ್ದಿದ್ದರೆ ಮೈಸೂರಿಗೆ ಕೀರ್ತಿ ಬರುತ್ತಿತ್ತು. ಈಗ ಈ ಸಭೆಯಲ್ಲಿರುವುದರಿಂದ ಇದರ ಘನತೆ ಗೌರವಗಳು ಹೆಚ್ಚಲು ಕಾರಣರಾಗಿದ್ದಾರೆ.

ಒಟ್ಟಿನಲ್ಲಿ, ಈ ಮಸೂದೆಯನ್ನು ನಾನಂತೂ ಮಂಡಿಸಿದ್ದೇನೆ. Principles Method ಇತ್ಯಾದಿ ವಿಷಯಗಳನ್ನೆತ್ತಿದ್ದಾರೆ. ಈ ತೆರಿಗೆಯನ್ನು scientific ಆಗಿ, ಎಂದರೆ, ಶಾಸ್ತ್ರೀಯವಾಗಿ ಹಾಕಿದ್ದೇವೆಂದು ನಾನು ಹೇಳುವುದಿಲ್ಲ. ಏಕೆಂದರೆ, ಆತುರವಾಗಿ ಅದನ್ನು ತರಬೇಕಾಯಿತು. ಭೂಮಿಯ ವಿಷಯದಲ್ಲಿ ಕಾನೂನು ಮಾಡಬೇಕಾದರೆ ಅನೇಕ ಕ್ಲಿಷ್ಟವಾದ ಸಮಸ್ಯೆಗಳು ಬರುತ್ತವೆ. It is so complicated and so varied from place to place that it is very difficult, when once you get into the whole System, we will take you to so many classifications and details. ಅದರಲ್ಲಿಯೂ ಐದು ಬೇರೆ ಬೇರೆ ಪದ್ಧತಿ ನಡೆದುಕೊಂಡು ಬಂದಿದೆ. ಅಲ್ಲದೆ ಅಣ್ಣನ ಭೂಮಿಯಲ್ಲಿರುವ ಸಾರ ತಮ್ಮನ ಭೂಮಿಯಲ್ಲಿ ಇರುವುದಿಲ್ಲ. ಅದರಲ್ಲಿ ಶ್ರೀಮಾನ್ ವೆಂಕಟಪ್ಪನರು ಹೇಳಿದ ಹಾಗೆ, ಎಲ್ಲ ತೆಂಗಿನ ತೋಟಗಳು

---

* ವಿಧಾನಸಭೆ

ಒಂದೇ ರೀತಿ ಇರುವುದಿಲ್ಲ. ಎಕರೆಗೆ ಎರಡು ಸಾವಿರ ರೂಪಾಯಿಯಷ್ಟು ಫಲ ಕೊಡುವುವೂ ಇವೆ. ಅದೇ ತಿಪಟೂರಿನ ಕಡೆ ಇನ್ನೂರು ರೂಪಾಯಿ ಕೊಡುವುವೂ ಇವೆ. ಹೀಗಿರುವುದರಿಂದ ಬೇರೆ ಬೇರೆ ವರ್ಗೀಕರಣ ಮಾಡಬೇಕಾಗುತ್ತದೆ. ಅಡಕೆ ತೋಟಗಳಲ್ಲಿಯೂ ಹೀಗೆಯೇ ಇದೆ. ಮೇಟು ಪಾಳ್ಯದ ಕಡೆ ಎಕರೆಗೆ ಆರು ಸಾವಿರ, ಎಂಟು ಸಾವಿರ ರೂಪಾಯಿ ಉತ್ಪತ್ತಿ ಬರುವ ತೋಟಗಳಿವೆ. ನಾನೇ ನೋಡಿದ್ದೇನೆ. ಅದೇ ತುಮಕೂರು ಜಿಲ್ಲೆಯಲ್ಲಿ ಎಂಟು ನೂರರಿಂದ ಸಾವಿರ ರೂಪಾಯಿವರೆಗೆ ಉತ್ಪತ್ತಿ ಕೊಡುವುದು ಇದೆ. ತಮಿಳುನಾಡಿನಲ್ಲಿ ಎಕರೆಗೆ ಎರಡೂವರೆ ಸಾವಿರ ರೂಪಾಯಿ ಗುತ್ತಿಗೆ ಕೊಡುತ್ತಾರೆ, ಎಂದು ಶ್ರೀಮಾನ್ ವೆಂಕಟಪ್ಪನವರು ಹೇಳಿದರು. ಕೃಷ್ಣಾಡೆಲ್ಟಾದಲ್ಲಿ ಹೀಗಿರುತ್ತದೆ. ಅದೇ ನಮ್ಮಲ್ಲಿ ತರಿಜಮೀನು ಎಕರೆಗೆ ಇನ್ನೂರು ರೂಪಾಯಿ ಕೂಡ ಉತ್ಪತ್ತಿ ಕೊಡುವುದಿಲ್ಲ. ಆದುದರಿಂದ ಈಗ ಭೂಮಿಯ ವಿಷಯದಲ್ಲಿ Scientific ಆಗಿ ಹೋದರೆ ಬಹಳ ಕಷ್ಟವಾಗುತ್ತದೆ. ಆದರೆ ಇದನ್ನು ಮಾಡಲೇಬೇಕು. ಖಾಯಂ ಆಗಿ ಶಾಸನವನ್ನು ತರುವಾಗ ಶಾಸ್ತ್ರೀಯವಾಗಿ ಮಾಡಬೇಕು ಆದುದರಿಂದ ಈಗಲೇ ಆ ರೀತಿ ಮಾಡಲು ಪ್ರಯತ್ನ ಮಾಡದೆ, ಹಿಂದೆ ಯಾವ ರೀತಿ ಮಾಡಿದ್ದಾರೋ ಅದರ ಮೇಲೆ flat rate ಹಾಕಿದರೆ ಈ ಪರಿಸ್ಥಿತಿಯಲ್ಲಿ ಸರಿಯೆಂದು ತರಿ ಮತ್ತು ಬಾಗಾಯಿಗಿಗೆ ಶೇಕಡ ನೂರರಷ್ಟು ಖುಷ್ಕಿಗೆ 75ರಷ್ಟು ಎಂದು ನಿಗದಿ ಮಾಡಲಾಗಿದೆ. ಇದನ್ನು ಶಾಸ್ತ್ರೀಯವಾಗಿ ಮಾಡಿದೆಯೆಂದು ನಾನು ಹೇಳುವುದಿಲ್ಲ. ಹಾಗೆ ಮಾಡಲು ನಮಗೆ ಕಾಲಾವಕಾಶವಿರಲಿಲ್ಲ. ಅಲ್ಲದೆ ಅದು ಗೊಂದಲಕ್ಕಿಟ್ಟುಕೊಳ್ಳುತ್ತಿತ್ತು.

ಎರಡನೆಯದಾಗಿ ಖುಷ್ಕಿ ಜಮೀನಿಗೆ 5 ಎಕರೆವರೆಗೆ ವಿನಾಯಿತಿ ಏಕೆ ಕೊಟ್ಟಿದೆಯೆಂದರೆ, ಖುಷ್ಕಿ vagaries of nature ಮೇಲೆ ಅವಲಂಬಿಸಿರುತ್ತದೆ. ಆದುದರಿಂದ ಈ ವಿನಾಯಿತಿ ಕೊಟ್ಟು ಶೇಕಡ 75ರಷ್ಟನ್ನು ಮಾಡೋಣವೆಂದು ಯೋಚನೆ ಮಾಡಿದೆವು. ಐದು ಎಕರೆಯೊಳಗಿರುವವರೆಲ್ಲರಿಗೂ ವಿನಾಯಿತಿಯಿರಬೇಕೆಂದು ಮಾಡಿದ್ದೇವೆ. ಹಳೆಯ ಮೈಸೂರು ಪ್ರದೇಶದಲ್ಲಿ 22 ಲಕ್ಷ ಹಿಡುವಳಿದಾರರು ಇದ್ದಾರೆ. ಇವರಲ್ಲಿ ಸುಮಾರು ಹನ್ನೊಂದು ಲಕ್ಷ ಜನರು ಐದು ಎಕರೆಗಿಂತ ಕಡಿಮೆಯಿರುವ ಬಡವರು. Socialistic Pattern Socieity ಇರುವ ಎಲ್ಲ ಕಡೆಯೂ ಎಲ್ಲ ತೆರಿಗೆಗಳಲ್ಲಿಯೂ ಕೆಳದರ್ಜೆ ಜನರಿಗೆ ರಿಯಾಯಿತಿ ಕೊಡುತ್ತಾರೆ. ಭೂಮಿಯ ವಿಷಯದಲ್ಲಿ ಐದು ಎಕರೆಗಿಂತ ಕಡಿಮೆಯಿರುವವರು Land Army ಇದ್ದ ಹಾಗೆ. ಇವರು ಕಷ್ಟ ಪಡುವ ಜನರು, partial producers. ತಮ್ಮ ಹೊಲದಲ್ಲಿ ಕೆಲಸ ಮಾಡಿ ಇತರರ ಜಮೀನಿನಲ್ಲಿಯೂ ಕೆಲಸ ಮಾಡುತ್ತಾರೆ. ಇಂಥ Land Army ಆಗಿರುವ ಜನರನ್ನು ಸ್ವಲ್ಪ ಸಂತೋಷಪಡಿಸುವುದು ನ್ಯಾಯ. ಇವರನ್ನು ಹೆಚ್ಚು ನೋಯಿಸಬಾರದು. ನಾವು ಆಹಾರ ಹೆಚ್ಚು ಉತ್ಪತ್ತಿ ಮಾಡುವುದರಲ್ಲಿ ನೇಗಿಲು ಹಿಡಿದು ಉಳುವವನನ್ನು ಸಂತೋಷ ಪಡಿಸಿದರೆ, ದೇಶಕ್ಕೆ ನೇರವಾಗಿ ಹೆಚ್ಚಿನ ಉತ್ಪತ್ತಿಯ ಪರಿಣಾಮ ಬರುತ್ತದೆ. ಈ ದೃಷ್ಟಿಯಿಂದ, ಐದು ಎಕರೆಗಿಂತ ಕಡಿಮೆಯಿರುವವರು ಬಡವರೆಂಬ ಮನೋಭಾವದಿಂದ ಹೀಗೆ ಮಾಡಿದ್ದೇವೆ.

**ಶ್ರೀ ಟಿ.ಎನ್. ಕೆಂಪಹೊನ್ನಯ್ಯ:** ಸಾಮಾನ್ಯವಾಗಿ ಬಾಗಾಯಿತು 5 ಎಕರೆ ಇಟ್ಟುಕೊಳ್ಳುವವನು 10 ಎಕರೆ ತರಿ ಇಟ್ಟುಕೊಳ್ಳುತ್ತಾನೆ. 20 ಎಕರೆ ತರಿ ಇದ್ದರೆ 40 ಎಕರೆ ಖುಷ್ಕಿ ಇರುತ್ತದೆ. ನೂರು ಎಕರೆ ತರಿ ಇದ್ದು ಐದು ಎಕರೆ ಖುಷ್ಕಿ ಇರುವವರು ಬಹಳ ಕಡಿಮೆ. ಆದಕಾರಣ ಬಡವರಿಗೆ ಪರಿಹಾರ ಕೊಡುವುದು ಮತ್ತು vagaries of natureಗೆ ಒಳಪಟ್ಟು ಖುಷ್ಕಿಗೇ ಸ್ವಲ್ಪ ರಿಯಾಯತಿ ಕೊಡುವುದು ನಮ್ಮ ಉದ್ದೇಶ. ಎರಡನೆಯದಾಗಿ ಇನ್ನೊಂದು ಕಾರಣವಿದೆ. ಒಂದು ಕತೆ ಹೇಳಿದರೆ ಅದು ಸ್ಪಷ್ಟವಾಗಬಹುದು. ಒಬ್ಬ ಜಿಪುಣ ತಾನು ಸಾಯಬೇಕೆಂದು ತೀರ್ಮಾನ ಮಾಡಿದ, ಅವನಲ್ಲಿ ಕೋಟ್ಯಾಂತರ ರೂಪಾಯಿ ಇತ್ತು. ಆದರೂ ನಾಲ್ಕಾರು ಅಂಗಡಿಗಳಿಗೆ ಹೋಗಿ ಪಾಷಾಣದ ಬೆಲೆಯನ್ನು ಕೇಳಿದ, ಬೆಲೆ ಹೆಚ್ಚೆಂದು ಕಡಿಮೆ ಬೆಲೆ ಇರುವ ಅಂಗಡಿಯನ್ನು ಅವನು ಹುಡುಕಿಕೊಂಡು ತಿರುಗಿದನಂತೆ.

**ಶ್ರೀ ಎಂ.ವಿ. ಕೃಷ್ಣಪ್ಪ:** ಜಿಪುಣರಾದ ಶ್ರೀಮಂತರು ಸಾಯುವಾಗ ಕಡಿಮೆ ಬೆಲೆಗೆ ಪಾಷಾಣ ಸಿಕ್ಕಿದರೂ ಅವರಿಗೆ ಸಂತೋಷ. ಸಣ್ಣ ಹಿಡುವಳಿದಾರನಿಗೆ ಕನ್ಸ್‌ವರ್‌ಷನ್ ಸಿಕ್ಕಿದರೆ phychologically he feels satisfied. Economically we are not deprived of much money. ಎರಡು ಮೂರು ಲಕ್ಷ ಆಗಬಹುದು. ಅದರಿಂದ ನನಗೂ ಪರಿಹಾರ ಸಿಕ್ಕಿತು ಎನ್ನುವ ಭಾವನೆ ಅವರಿಗೂ ಬರುತ್ತದೆ. ಮುಂದೆ ವಾದ ವಿವಾದ paying capacity, principles of taxation ಇವುಗಳ ವಿಷಯದಲ್ಲಿ ಹಲವು ಸದಸ್ಯರು ಅವರವರೇ ಉತ್ತರ ಕೊಟ್ಟುಕೊಂಡಿದ್ದಾರೆ. paying capacityಯಲ್ಲಿ ವಾದ ವಿವಾದ ಎರಡೂ ಇವೆ.

ನಾನು ಕಂದಾಯವನ್ನು ಹಾಕುವಾಗ ನನಗೆ ವಿರೋಧವಾಗಿ ವಾದ ಮಾಡುವ ಪರಿಸ್ಥಿತಿ ಬಂದಿದೆ. ಒಟ್ಟಿನಲ್ಲಿ ಆರ್ಗ್ಯುಮೆಂಟ್‌ಗೆ ಎಂಟರ್ ಆಗಬಾರದು. ತುರ್ತು ಪರಿಸ್ಥಿತಿಯಲ್ಲಿ ಜೀವನ ಮಾಡುವುದರಲ್ಲಿಯೂ ಸ್ವಲ್ಪ ತ್ಯಾಗ ಮಾಡಬೇಕು. ಈಗ 80 ಪರ್ಸೆಂಟ್ ಇರುವವರೂ ತ್ಯಾಗ ಮಾಡಬೇಕು. 20 ಪರ್ಸೆಂಟ್ ಇರುವವರೂ ತ್ಯಾಗ ಮಾಡಬೇಕು. ಒಟ್ಟಿನಲ್ಲಿ ದೇಶಕ್ಕೆ ಹಣಬೇಕಾದರೆ ಶ್ರೀಮಾನ್ ಮಲ್ಲಾರಾಧ್ಯರು ಹೇಳಿದರು. Directly it has no relationship with the emergeny because you have not mentioned it in the Statement of objects and reasons. ಸ್ಟೇಟ್‌ಮೆಂಟ್ ಆಪ್ ಆಬ್ಜಕ್ಟ್ಸ್ ಅಂಡ್ ರೀಜನ್ಸ್‌ನಲ್ಲಿ ಮೆನ್‌ಷನ್ ಮಾಡದೆ ಇದ್ದರೂ ಅದನ್ನು ನಾನು ನನ್ನ ಭಾಷಣದಲ್ಲಿ ಹೇಳಿದೆ. ಕೇಂದ್ರದಿಂದ ಬರತಕ್ಕ ಉತ್ಪತ್ತಿಯ ವಿಷಯದಲ್ಲಿ ನಾವು ಎಷ್ಟು ನಿರೀಕ್ಷಿಸಿದ್ದೆವೋ ಅಷ್ಟು ಬರುವುದಿಲ್ಲ. ಏತಕ್ಕೆಂದರೆ ಅವರು ಡಿಪೆನ್ಸ್‌ಗೋಸ್ಕರ ಹಣವನ್ನು ಖರ್ಚು ಮಾಡಲೇಬೇಕಾಗಿದೆ. 100 ಕೋಟಿ ರೂಪಾಯಿಗಳನ್ನು ದೇಶದ ರಕ್ಷಣೆಗೋಸ್ಕರ ಖರ್ಚು ಮಾಡುವ ಪರಿಸ್ಥಿತಿಯಲ್ಲಿರುವುದರಿಂದ ಅಲ್ಲಿಂದ ನಮಗೆ ಬರುವ ಹಣ ಕಡಿಮೆಯಾಗಿದೆ. ಕಡಿಮೆ ಬಿದ್ದಿರುವ ಹಣವನ್ನು ನಾವು ಇಲ್ಲಿ ತುಂಬಿಸಿಕೊಳ್ಳಬೇಕಾಗುತ್ತದೆ. ದೇಶದಲ್ಲಿ ಹೆಚ್ಚು ಆಹಾರವನ್ನು ಬೆಳೆಯುವ ಯೋಜನೆಯನ್ನು ಹಾಕಿಕೊಂಡು ಅದನ್ನು ಮಾಡಬೇಕಾಗುತ್ತದೆ. ದೇಶದಲ್ಲಿ ತುರ್ತು ಪರಿಸ್ಥಿತಿ ಆಗಿರುವಾಗ ಹಳ್ಳಿಯಲ್ಲಿ ಹೆಣ್ಣು ಮಕ್ಕಳು ಹುಲ್ಲು ಕೀಳುವುದರಿಂದ ಬರತಕ್ಕಂಥ ಉತ್ಪತ್ತಿಯೂ

ಸಹ ಯುದ್ಧಕ್ಕೆ ಹೋಗುತ್ತದೆ. ದೇಶದಲ್ಲಿ ತುರ್ತು ಪರಿಸ್ಥಿತಿ ಇರುವಾಗ ಹಳ್ಳಿಯಲ್ಲಿರತಕ್ಕ ಚಿಕ್ಕ ಹೆಣ್ಣು ಮಕ್ಕಳೂ ಸಹಾಯ ಮಾಡುತ್ತಾರೆ. ಯಾವ ದೃಷ್ಟಿಯಿಂದ ಏನೇನು ಕೆಲಸ ಮಾಡಿ ಹೆಚ್ಚಿಗೆ ಆಹಾರವನ್ನು ಬೆಳೆದರೂ ಅದು ದೇಶದ ರಕ್ಷಣೆಗೆ ಸಹಾಯ ಮಾಡಿದಂತಾಗುತ್ತದೆ. ಈ ಮಸೂದೆಯ ವಿಷಯದಲ್ಲಿ ಹಿಂದೆ ಇದ್ದ ಕ್ಯಾಬಿನೆಟ್‌ನವರಿಗೆ ವಿರೋಧಾಭಿಪ್ರಾಯ ಇತ್ತು ಎಂದು ಕೆಲವು ಮಾನ್ಯ ಸದಸ್ಯರು ಹೇಳಿದರು. ಹಿಂದಿನ ಸರ್ಕಾರದವರೇ ಈ ಬಿಲ್ಲನ್ನು ಮಾಡಿದರು. ಅವರು ರೆಡಿಯಾಗಿ ಇಟ್ಟಿದ್ದರು. ಹೊಸ ಮಂತ್ರಿ ಮಂಡಲ ಬಂದ ತಕ್ಷಣ ಈಗಿನ ಪರಿಸ್ಥಿತಿಯಲ್ಲಿ ಇದನ್ನು ಜಾರಿಗೆ ತರುವುದು ಬೇಡ ಎಂದಿದ್ದೆವು ಏಕೆಂದರೆ ಎರಡು ಮೂರು ವರ್ಷಗಳಿಂದಲೂ ಸರಿಯಾಗಿ ಮಳೆ ಬೆಳೆ ಆಗಿಲ್ಲ. ಅನೇಕ ಸ್ಥಳಗಳಲ್ಲಿ ಪ್ರವಾಹದ ತೊಂದರೆಯುಂಟಾಗಿದೆ. ಇಂಥಾ ಒಂದು ಪರಿಸ್ಥಿತಿಯಲ್ಲಿ ಕಂದಾಯವನ್ನು ಜಾಸ್ತಿ ಮಾಡಬಾರದು ಎಂದು ಈ ಮಸೂದೆಯನ್ನು ಹಿಂದೆ ಇಟ್ಟಿದ್ದೆವು. ಈಗ ದೇಶದಲ್ಲಿ ತುರ್ತು ಪರಿಸ್ಥಿತಿ ಒದಗಿರುವುದರಿಂದ ಈ ಮಸೂದೆಯನ್ನು ಜಾರಿಗೆ ತರಲೇಬೇಕೆಂದು ತೀರ್ಮಾನ ಮಾಡಿರುವುದರಿಂದ ಈಗ ಈ ಮಸೂದೆಯನ್ನು ಈ ಸಭೆಯ ಮುಂದೆ ತಂದಿದ್ದೇವೆ. ಜನಗಳು ಈ ಸಂದರ್ಭದಲ್ಲಿ ತ್ಯಾಗ ಮಾಡಬೇಕೆಂದು ನಾವು ಪ್ರಾರ್ಥನೆ ಮಾಡಿಕೊಳ್ಳುತ್ತಿದ್ದೇವೆ.

**ಶ್ರೀ ಎಂ.ಪಿ. ಈಶ್ವರಪ್ಪ:** In the original Act ಸರ್ವೆ ಅಂಡ್ ಸೆಟಲ್‌ಮೆಂಟ್ ಆಗದೆ ಇದ್ದುದಕ್ಕೆ 15% ಮತ್ತು ಅದಕ್ಕೆ 20% ಎಂತ ಇದ್ದುದ್ದನ್ನು ಈಗ ಏಕೆ ತೆಗೆದುಹಾಕಿದ್ದಾರೆ? ಕಾರಣವೇನು?

**ಶ್ರೀ ಎಂ.ವಿ. ಕೃಷ್ಣಪ್ಪ:** ಈ ಹಿಂದೆ ಹಾಕಲಾದ ಆ ಸರ್‌ಚಾರ್ಜಿನ ಬಗ್ಗೆ ಬೇಕಾದಷ್ಟು ಕನ್‌ಫ್ಯೂಜನ್ ಉಂಟಾಗಿತ್ತು. ಕೆಲವರಿಗೆ ಎಗ್‌ಜಂಪ್ಷನ್, ಕೆಲವು ಕಡೆ ಸ್ಟ್ಯಾಂಡರ್ಡ್ ಎಕರೆ ಇವುಗಳ ಅರ್ಥ ಸರಿಯಾಗಿ ಆಗದೆ ಗೊಂದಲಕ್ಕಿಟ್ಟುಕೊಂಡಿತು. ಆ ಗೊಂದಲವನ್ನು ತಪ್ಪಿಸಲು from practical point of view and from administrative point of view ಒಂದು flat-rate ನ್ನು ಹಾಕತಕ್ಕದ್ದು ಉಚಿತವೆಂದು ತೋರಿತು ಸರ್ವೆ ಆಗಿರತಕ್ಕ ಪ್ರದೇಶಕೊಂದು ರೀತಿ ಎಂದು ಮಾಡಲು ಸಾಧ್ಯವಾಗುವುದಿಲ್ಲ. ಇದೇನಿದ್ದರೂ ಕೇವಲ ಎರಡುಗಳಿಗೆ ಮಾತ್ರ. ಈಗಾಗಲೇ ಹಳ್ಳಿಯ ಶ್ಯಾನುಭೋಗರುಗಳನ್ನೆಲ್ಲ ತೆಗೆದುಹಾಕುವುದಕ್ಕೆ ಪ್ರಯತ್ನ ಮಾಡಿದ್ದೇವೆ. ಈ ಸಂದರ್ಭದಲ್ಲಿ ಹೊಸದಾಗಿ ಬರತಕ್ಕ ಶ್ಯಾನುಭೋಗರುಗಳಿಗೆ ಸಾಕಷ್ಟು ಅನುಭವ ಬೇರೆ ಇರುವುದಿಲ್ಲ. ಮುಂದೆ ಸಂಭವಿಸತಕ್ಕ ಕಾಂಪ್ಲಿಕೇಷನ್ ಎಷ್ಟು ತೊಂದರೆ ಆಗಬಹುದು ಎಂಬ ನಾನಾ ದೃಷ್ಟಿಯಿಂದ flat rateನ್ನು ಸಜೆಸ್ಟ್ ಮಾಡಲಾಗಿದೆ. ಈಗಾಗಲೇ ನಮಗೆ ಬೇಕಾಗಿರತಕ್ಕ 7,500 ಜನ ಶ್ಯಾನುಭೋಗರುಗಳಲ್ಲಿ 1,500 ಜನರು ಉತ್ತರ ಕರ್ನಾಟಕದಲ್ಲಿ ತಲಾಟಿಗಳಂತೆ ಕೆಲಸ ಮಾಡಿಕೊಂಡಿದ್ದಾರೆ. ಅವರ ಜೊತೆಗೆ ಇನ್ನು 6,000 ಜನ ಬೇಕಾಗಿದ್ದಾರೆ. ಅವರನ್ನು ಹೊಸದಾಗಿ ರೆಕ್ರೂಟ್ ಮಾಡಿದ್ದೇವೆ. ಆ ಪೈಕಿ ಅರ್ಧ ಜನರು ಈಗಾಗಲೇ ಟ್ರೈನಿಂಗ್ ಪಡೆಯುತ್ತಿದ್ದಾರೆ. ಅವರ ಟ್ರೈನಿಂಗ್ ಪೂರೈಸಿದ ಕೂಡಲೆ ಅವರು ಮೊದಲು ಪಂಚಾಯಿತಿ ಸೆಕ್ರೆಟರಿಗಳನ್ನಾಗಿ ನೇಮಿಸಿಕೊಳ್ಳಲಾಗುತ್ತದೆ. ಆನಂತರ ಅವರನ್ನು ಈ ವಸೂಲಿ ಕೆಲಸಕ್ಕೂ ನೇಮಿಸಿಕೊಳ್ಳಲಾಗುತ್ತದೆ. ಅಷ್ಟರ ವೇಳೆಗೆ ಈ ಹೊಸ ಬಿಲ್ಲು ಜಾರಿಗೆ ಬರುತ್ತದೆ.

ಶ್ರೀಮಾನ್ ಈಶ್ವರಪ್ಪನವರು ವಿಧಿಯಿಲ್ಲದೆ ಇದನ್ನು ಅವರು ವಿರೋಧಿಸಬೇಕಾಗಿ ಬಂದಿದೆ. ಆದರೂ ಈ ಮಾನ್ಯ ಸಭೆಯವರೆಲ್ಲರೂ ಒಮ್ಮತದಿಂದ ಈ ಮಸೂದೆಗೆ ಬೆಂಬಲ ನೀಡಲು ಮುಂದೆ ಬಂದುದಕ್ಕಾಗಿ ನಾನು ಅವರೆಲ್ಲರಿಗೂ ನನ್ನ ಧನ್ಯವಾದಗಳನ್ನು ಅರ್ಪಿಸಬೇಕಾಗಿದೆ.

ಏನೋ ಒಂದು ವಿಧದಲ್ಲಿ ತಂದಿದ್ದಾರೆ ಎಂದು ವಿರೋಧ ಮಾಡಿದ್ದಾರೆ. ಏನಾದರೂ ನಾನು ಮೊದಲೇ ಈ ಬಿಲ್ಲನ್ನು ತಂದಿದ್ದರೆ, ಅವರು ನನ್ನನ್ನು ಎದ್ದು ಹೊಡೆದು ಬಿಡುತ್ತಿದ್ದರೋ ಏನೋ ಎನ್ನುವಂತೆ ನನಗೆ ಭಾಸವಾಯಿತು. ಇಷ್ಟು ಮಾಡಿ ತಂದಿದ್ದರೂ ಇದರಲ್ಲಿ ಮೂರುವರೆ ಕೋಟಿಗಿಂತ ಕಂದಾಯ ಜಾಸ್ತಿ ಬರುವುದಿಲ್ಲ. ಸರಕಾರ ಈ ಬಿಲ್ಲನ್ನು ತಂದಿರುವ ಈ ಕಾಲದಲ್ಲಿ ತುರ್ತು ಪರಿಸ್ಥಿತಿ ಬಂದಿರುವುದನ್ನು ಎಲ್ಲರೂ ಅರಿತುಕೊಂಡಿದ್ದಾರೆ. ಇದರಲ್ಲಿ ಇನ್ನೇನೂ ಇಲ್ಲ. ಈ ಬಿಲ್ಲನ್ನು ಮಾನ್ಯ ಸಭೆಯವರು ಒಪ್ಪುತ್ತಾರೆ ಎಂದು ಹೇಳಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

* * * * *

# ಮೈಸೂರು ಟ್ರೆಜರರ್ ಟ್ರೋವ್ ಬಿಲ್
# 1962

**ಶ್ರೀ ಎಂ.ವಿ. ಕೃಷ್ಣಪ್ಪ ಅವರು ವಿಧಾನಸಭೆಯ ಚರ್ಚೆಯಲ್ಲಿ ಮಾತನಾಡುತ್ತಾ ಭೂಮಿಯಲ್ಲಿ ಸಿಗುವ 'ನಿಧಿ' ಸರ್ಕಾರಕ್ಕೆ ಸಲ್ಲಿಸಬೇಕು ಎಂದು ತಿಳಿಸುವರು. ಇದಕ್ಕೆ ಸಂಬಂಧಿಸಿದಂತೆ ಕಂದಾಯ ಸಚಿವರಾಗಿ ಶ್ರೀಯುತರು ಮಂಡಿಸಿದ ಬಿಲ್.**

**ಶ್ರೀ ಎಂ.ವಿ. ಕೃಷ್ಣಪ್ಪ:** ಸ್ವಾಮಿ ಇದು ಬಹಳ ಚಿಕ್ಕ ಮಸೂದೆ. ಯಾರಿಗಾದರೂ ಗಂಟು ಸಿಕ್ಕಿದರೆ ಅಥವಾ ನಿಧಿ ಸಿಕ್ಕಿದರೆ ಅದು ಯಾರ ವಶವಾಗಬೇಕು? ಲಕ್ಷಾಂತರ ರೂಪಾಯಿ ಸಿಕ್ಕಿರುವ ಸಂದರ್ಭಗಳೂ ಇವೆ. ಬಂಗಾರ ಬಿಂದಿಗೆಯ ತುಂಬ ಸಿಕ್ಕಿ ಕೆಲವರು ಶ್ರೀಮಂತರಾಗಿದ್ದಾರೆ. ಹೀಗೆ ಸಿಕ್ಕಿದಾಗ ಯಾವ ಯಾವ ಕಾನೂನನ್ನು ಅನುಸರಿಸಬೇಕೆಂಬ ಪ್ರಶ್ನೆ ಬರುತ್ತದೆ. ಈಗ ಮೈಸೂರು ರಾಜ್ಯದಲ್ಲಿ ಸೇರಿರುವ ಐದು ಭಾಗಗಳಲ್ಲಿ ಐದು ಬೇರೆ ಬೇರೆ ಕಾನೂನುಗಳಿವೆ. ಆದುದರಿಂದ ಒಂದೇ ಯೂನಿಫಾರಂ ಲೆಜಿಸ್ಲೇಷನ್' ಆಗಿ ತರಬೇಕೆಂಬ ಉದ್ದೇಶದಿಂದ ತಂದಿದ್ದೇವೆ. ಇದರಲ್ಲಿ Aims and objects ನ್ನು ಕ್ಲಿಯರಾಗಿ ಸೇರಿಸಿದ್ದೇನೆ. ಹಣ ಸಿಕ್ಕಿದ ತಕ್ಷಣ ಜಿಲ್ಲಾಧಿಕಾರಿಗಳಿಗೆ ಹೇಳಬೇಕು. ತನ್ನ ಜಮೀನಿನಲ್ಲಿ ತಾಯಿ ತಂದೆಯವರು ಇಟ್ಟಿದ್ದ ಹಣವೆಂದು ಪ್ರೂವ್ ಮಾಡುವುದಕ್ಕೆ ಬಂದರೆ ಅದು 100 ವರ್ಷಗಳಿಗಿಂತಲೂ ಹಿಂದಿನದು ಇದ್ದರೆ ಅವನಿಗೆ ಹಕ್ಕಿಲ್ಲ. ಅರ್ಧಭಾಗ ಹಿಡಿದವನಿಗೆ ಮಿಕ್ಕರ್ಧಭಾಗ ಸ್ಥಳದವನಾಗಿ, ಪ್ರೂವ್ ಮಾಡಿದವನಿಗೆ ಕೊಡಬೇಕೆಂದು ಈ ಕಾನೂನಿನಲ್ಲಿದೆ. ಏನಾದರೂ ಪ್ರಾಚೀನ ರೂಪವಾಗಿ ಬಂದಂಥ ನಾಣ್ಯಗಳು ಸಿಕ್ಕಿದರೆ ಅವನ್ನು ಸರ್ಕಾರದವರು ಕಂಪರ್ಸೇಷನ್ ಕೊಟ್ಟು ತೆಗೆದುಕೊಳ್ಳಬಹುದೆಂದು ಈ ಕಾನೂನಿನಲ್ಲಿದೆ. ಇದಕ್ಕೆ ತಮ್ಮ ಒಪ್ಪಿಗೆ ಬೇಕು. ಆದರೆ ಸರ್ಕಾರಕ್ಕೆ ಈ ಬಿಲ್ಲಿನ ಪ್ರಕಾರ ಮೂರು ಕಾಸು ಕೂಡ ಬರುವುದಿಲ್ಲ. ಆದರೆ ಸರ್ಕಾರ ಅಂಥ ಗಂಟನ್ನು ಉಡಾಯಿಸಿ ತನ್ನ ವಶಮಾಡಿಕೊಳ್ಳಬೇಕೆಂಬ ಉದ್ದೇಶವೇನೂ ಇಲ್ಲ. ಈಗ ದಾರಿಯಲ್ಲಿ ಯಾರೋ ಹೋಗುತ್ತಿರವಾಗ, ಶ್ರೀ ಮುಕ್ಕಣ್ಣನವರಿಗೇ ಕೋಟಿ ರೂಪಾಯಿ ಸಿಗುತ್ತದೆ ಎಂತು ಇಟ್ಟುಕೊಳ್ಳೋಣ. ಆಗ ಆ ಹಣ ಇದ್ದ ಜಾಗದವನು ಅದು ಆತನಿಗೆ ಸೇರಬೇಕೆಂದೂ, ಯಾರಿಗೆ ಸಿಕ್ಕುತ್ತದೋ ಅವನು ಅದು ತನಗೆ ಸೇರಬೇಕೆಂಗೂ ವ್ಯಾಜ್ಯ ಉಂಟಾಗುತ್ತದೆ. ಆಗ ಅದು ಸರ್ಕಾರದವರ ಮುಂದೆ ಬರಲೇಬೇಕು. ಅಂಥ ಸಂದರ್ಭಗಳಲ್ಲಿ ಆ ವ್ಯಾಜ್ಯದ ಬಗ್ಗೆ ಒಂದು ತೀರ್ಮಾನ ಕೊಡಲು ಡಿ.ಸಿ.ಗೆ ಅಧಿಕಾರ ಕೊಟ್ಟಿದ್ದೇವೆ. ಆದರೆ ಇದರಲ್ಲಿ ಅವರಿಗೆ ಕೊಟ್ಟಿರುವ ಅಧಿಕಾರವಾದರೂ ಏನು? ಆ ಸಿಕ್ಕಿದಂತ ಹಣ ನೂರು ವರ್ಷಗಳ ಹಿಂದಿನ ಗಂಟೇ ಅಥವಾ ಅಲ್ಲವೇ ಎಂಬುದನ್ನು ಅವರು ತೀರ್ಮಾನ ಮಾಡುತ್ತಾರೆ. ಇಷ್ಟೇ ಇದರಲ್ಲಿ ಅವರ ಕೆಲಸ ಅದನ್ನೆಲ್ಲಾ ಈ ಬಿಲ್ಲಿನಲ್ಲಿ ಕ್ಲಿಯರಾಗಿ ಹೇಳಿದ್ದೇವೆ. ಇಷ್ಟಕ್ಕೇನೇ ಶ್ರೀ ಮುಕ್ಕಣ್ಣಪ್ಪನವರು ದೊಡ್ಡ ಭಾಷಣ ಮಾಡಿಬಿಟ್ಟರು. ಭೂಮಿಯಲ್ಲಿ ಸಿಕ್ಕತಕ್ಕ ನಾಣ್ಯ ನೂರು ವರ್ಷಕ್ಕೆ ಹಿಂದಿನೇ ಅಥವಾ ಅಲ್ಲವೇ ಎಂಬುದನ್ನು ಆರ್ಕಿಯೋಲಾಜಿಕಲ್ ಇಲಾಖೆಯವರು ಸುಲಭವಾಗಿ ಪತ್ತೆ ಮಾಡಬಲ್ಲರು ಈಗ ಉದಾಹರಣೆಗೆ

ಹೈದರಾಲಿಯ ನಾಣ್ಯಗಳು ಸಿಕ್ಕಿದುವೆಂದು ಇಟ್ಟುಕೊಳ್ಳೋಣ. ಆಗ ಆ ಹೈದರಾಲಿ ಯಾವಾಗ ಆಡಳಿತ ಮಾಡುತ್ತಿದ್ದ. ಆ ಕಾಲ ಯಾವುದು ಎಂಬುದನ್ನು ಕಂಡು ಹಿಡಿದು ನಾಣ್ಯದ ಕಾಲ ಯಾವುದು, ಎಷ್ಟಾಗಿದೆ ಎಂಬುದನ್ನು ನಿಗದಿ ಮಾಡಬಹುದು. ಮೇಲಾಗಿ ಆ ನಾಣ್ಯಗಳ ಮೇಲೆ ಚಲಾವಣೆ ವರ್ಷ ಇರುತ್ತೆ.

**MR. SPEAKER:** There is no such presumption that the treasure trove was Minted and hidden simultanesously

**SRI M.V. KRISHNAPPA:** I only gave an illustration. The trove may be not only coin but some other valuable also.

**ಶ್ರೀ ಎಂ.ವಿ. ಕೃಷ್ಣಪ್ಪ:** ಆ ನಾಣ್ಯ 100 ವರ್ಷಗಳಿಗೆ ಹಿಂದಿನದೇ, ಅಲ್ಲವೇ ಎಂಬುದನ್ನು ಪತ್ತೆ ಮಾಡಬಹುದು. ಬರಿನಾಣ್ಯವೊಂದೇ ಸಿಕ್ಕುವುದಿಲ್ಲ. ಒಡವೆ, ಬಂಗಾರದ ಗಟ್ಟಿ ಇತ್ಯಾದಿಗಳೆಲ್ಲಾ ಸಿಕ್ಕಬಹುದು. ಅಂಥ ಸಂದರ್ಭಗಳಲ್ಲಿ ಆ ಸ್ಥಳ ವಿದ್ಯಮಾನವನ್ನು ಗಣನೆಗೆ ತೆಗೆದುಕೊಂಡು ಅಲ್ಲಿ ಯಾವ ಕೋಟೆ–ಕೊತ್ತಲಿತ್ತು ಆ ಆಡಳಿತ ಯಾರ್‍ಯಾರ ಕೈಯಲ್ಲಿತ್ತು. ಆ ಕಾಲ ಯಾವುದು ಎಂಬುದನ್ನು ಕಂಡು ಹಿಡಿಯಬಹುದು. ಈ ಬಗ್ಗೆ ಡಿ.ಸಿ. ಒಂದು ತೀರ್ಮಾನ ಕೊಡುತ್ತಾರೆ. ಆ ಬಗ್ಗೆ ತಕರಾರು ಮಾಡತಕ್ಕವರು ಕೋರ್ಟಿಗೆ ಅಪೀಲ್ ಹೋಗಬಹುದು. ಆದರೆ ನಾಣ್ಯದ ಕಾಲ ನಿರ್ಣಯದ ಅಧಿಕಾರ ಮಾತ್ರ ಡಿ.ಸಿ.ಗೆ ಮಾತ್ರ ಕೊಡಲಾಗಿದೆ. ಆದ್ದರಿಂದ ಅಂಥ ತೊಂದರೆಯೇನೂ ಇದರಿಂದ ಆಗಲಾರದು.

* * * * *

## ಹೆಚ್ಚುವರಿ ಜಿಲ್ಲಾಧಿಕಾರಿಗಳ ನೇಮಕ ಹಾಗೂ ಹೆಚ್ಚುವರಿ ಅಧಿಕಾರ *

**ಶ್ರೀ ಎಂ.ವಿ. ಕೃಷ್ಣಪ್ಪ ಅವರು ಜಿಲ್ಲಾಧಿಕಾರಿಗಳ ಜವಾಬ್ದಾರಿ ಅರಿತುಕೊಂಡು ಅವರ ಜೊತೆಗೆ ಹೆಚ್ಚುವರಿ ಜಿಲ್ಲಾಧಿಕಾರಿಗಳ ಕೆಲಸ ಕಾರ್ಯಗಳ ಜವಾಬ್ದಾರಿಯನ್ನು ಹಂಚುವ ವಿಚಾರ ಮಾಡಿದರು. ಇದಕ್ಕೆ ಸಂಬಂಧಿಸಿದಂತೆ ವಿಧಾನ ಪರಿಷತ್‌ನಲ್ಲಿ ಮಂಡಿಸಿದ ವಿಚಾರ ಅರ್ಥಪೂರ್ಣ.**

**ಶ್ರೀ ಎಂ.ವಿ. ಕೃಷ್ಣಪ್ಪ (ಕಂದಾಯ ಹಾಗೂ ಅಬ್ಕಾರಿ ಸಚಿವರು):** ಈಗ ಮೈಸೂರಿನಲ್ಲಿ ಜಾರಿಯಲ್ಲಿರುವ 1888ರ ಲ್ಯಾಂಡ್ ರೆವೆನ್ಯೂ ಕೋಡ್ ಪ್ರಕಾರ ಮೈಸೂರು ಸರ್ಕಾರಕ್ಕೆ ಅಡಿಷನಲ್ ಡೆಪ್ಯೂಟಿ ಕಮೀಷನರ್‌ಗಳನ್ನು ನೇಮಕ ಮಾಡುವ ಅಧಿಕಾರವಿಲ್ಲ. ಕೇಂದ್ರ ಸರ್ಕಾರದ ವ್ಯವಸಾಯ ಇಲಾಖೆಯವರು ಆಹಾರವನ್ನು ಹೆಚ್ಚಿಗೆ ಬೆಳೆಯುವ ದೃಷ್ಟಿಯಿಂದ ಒಂದೊಂದು ಸಂಸ್ಥಾನದಲ್ಲಿ ಒಂದು ಜಿಲ್ಲೆಯನ್ನು ಸೆಲೆಕ್ಟ್ ಮಾಡಿಕೊಂಡು, ಆ ಜಿಲ್ಲೆಗಳಲ್ಲಿ ರೈತರಿಗೆ ಬೇಕಾದಂಥ ಎಲ್ಲಾ ಅನುಕೂಲಗಳನ್ನೂ, ಕಲ್ಪನೆ ಮಾಡಿ, ರೈತರಿಗೆ ಬೇಕಾದಂಥ ಪೂರ್ತಿ ಸಾಲದ ಅವಶ್ಯಕತೆಯನ್ನು, ರೈತರು ಉಪಯೋಗಿಸಿಕೊಳ್ಳುವ ಗೊಬ್ಬರವನ್ನೂ, ಬೀಜ, ಮರಮುಟ್ಟುಗಳನ್ನು ಸಪ್ಲೈ ಮಾಡಿ, ದೇಶದಲ್ಲಿ ಆ ಜಿಲ್ಲೆಯನ್ನು ಮಾದರಿ ಜಿಲ್ಲೆಯಾಗಿ ಮಾಡಿ, ಅಲ್ಲಿ ಆಹಾರವನ್ನು ಹೆಚ್ಚಿಗೆ ಉತ್ಪಾದನೆ ಮಾಡಬೇಕೆಂದು ತೆಗೆದುಕೊಂಡಿರುವ ನೀತಿಯಂತೆ, ನಮ್ಮ ರಾಜ್ಯದಲ್ಲಿ ಮಂಡ್ಯ ಜಿಲ್ಲೆಯನ್ನು ಪ್ಯಾಕೇಜ್ ಪ್ರೋಗ್ರಾಂಗಾಗಿ ಸೆಲೆಕ್ಟ್ ಮಾಡಿದೆ. ಈ ಪ್ಯಾಕೇಜ್ ಸ್ಕೀಮಿನ ಪ್ರಕಾರ ಬಹಳ ಕೆಲಸ ಮಾಡಬೇಕಾಗುತ್ತದೆ. ಈಗ ರೈತನಿಗೆ ಬೇಕಾದಂತ ಸಾಲದಲ್ಲಿ ಸರ್ಕಾರ ಶೇಕಡ 6–7ರಷ್ಟು ಭಾಗವನ್ನು ಒದಗಿಸುತ್ತಿರಬಹುದು. ಆದರೆ ಪ್ಯಾಕೇಜ್ ಸ್ಕೀಮಿನ ಪ್ರಕಾರ ರೈತನಿಗೆ 100ಕ್ಕೆ 100 ಪರ್ಸೆಂಟ್ ಸಾಲ ಒದಗಿಸುತ್ತದೆ. ಉದಾಹರಣೆಗೆ ಮಂಡ್ಯ ಜಿಲ್ಲೆಗೆ ಒಂದು ಕೋಟಿ ರೂಪಾಯಿ ಬೇಕಾದರೆ, ಒಂದು ಕೋಟಿ ರೂಪಾಯಿಯನ್ನು ಕೊಡುತ್ತಾರೆ. ಮಂಡ್ಯ ಜಿಲ್ಲೆಗೆ 20 ಸಾವಿರ ಟನ್ ಗೊಬ್ಬರದ ಅವಶ್ಯಕತೆ ಇದ್ದರೆ 20 ಸಾವಿರ ಟನ್ ಗೊಬ್ಬರವನ್ನೂ ಕೊಡುತ್ತಾರೆ.

ಮಂಡ್ಯ ಜಿಲ್ಲೆಗೆ 4 ಸಾವಿರ ಟನ್ ಕಬ್ಬಿಣ, ಮರಮುಟ್ಟುಗಳಿಗೆ ಬೇಡಿಕೆ ಇದ್ದರೆ ಅಷ್ಟನ್ನೂ ನೀಡುತ್ತಾರೆ. ರೈತನು ತಾನು ಬೆಳೆದ ವಸ್ತುಗಳಿಗೆ ಮಾರ್ಕೆಟ್ ಕಲ್ಪನೆ ಮಾಡುವುದಕ್ಕೆ ಸೊಸೈಟಿಗಳನ್ನು ಅನುಕೂಲತೆಗಳನ್ನು ಕಲ್ಪಿಸಿ ಕೊಟ್ಟಿದ್ದಾರೋ ಅದೇ ರೀತಿಯ ಅನುಕೂಲತೆಗಳನ್ನು ನಮ್ಮ ದೇಶದಲ್ಲಿಯೂ ಒಂದೊಂದು ಜಿಲ್ಲೆಯಲ್ಲಿ ಕಲ್ಪಿಸಿಕೊಟ್ಟು ಅದರಿಂದ ಉತ್ಪಾದನೆ ಜಾಸ್ತಿ ಮಾಡಬೇಕೆಂದಿದ್ದಾರೆ. ಈಗ ಇರುವ ಜಿಲ್ಲಾಧಿಕಾರಿಗಳಿಗೆ ಎಷ್ಟು ಕೆಲಸವಿದೆಯೋ, ಅದಕ್ಕಿಂತಲೂ

---

* ವಿಧಾನ ಪರಿಷತ್ 1962

ಹೆಚ್ಚಿಗೆ ಕೆಲಸ ಅಡಿಷನಲ್ ಡೆಪ್ಯುಟಿ ಕಮೀಷನರಿಗೆ ಇರುತ್ತದೆ. ಈಗ ಡೆಪ್ಯೂಟಿ ಕಮೀಷನರುಗಳಿಗೆ ಏನು ಅಧಿಕಾರಿವಿದೆಯೋ ಅಷ್ಟು ಅಧಿಕಾರವೂ ಪೂರ್ತಿ ಅಡಿಷನಲ್ ಡೆಪ್ಯೂಟಿ ಕಮೀಷನರಿಗೆ ಇಲ್ಲದಿದ್ದರೆ, ನಮ್ಮ ಉದ್ದೇಶ ನೆರವೇರುವುದಿಲ್ಲ. ಈಗಿನ ಜಿಲ್ಲಾಧಿಕಾರಿಗಳಿಗೆ ಎಷ್ಟು ಅಧಿಕಾರ ಇದೆಯೋ ಅಷ್ಟು ಅಧಿಕಾರ ಅಡಿಷನಲ್ ಡೆಪ್ಯೂಟಿ ಕಮೀಷನರಿಗೆ ಇದ್ದರೆ ಕೆಲಸ ಕಾರ್ಯಗಳು ಬೇಗ ನಡೆಯುತ್ತವೆ. ಈ ಅಡಿಷನಲ್ ಕಮೀಷನರುಗಳ ಆರ್ಡಿನೆನ್ಸನ್ನು ಪಾಸ್ ಮಾಡಿದಾಗ ಈ ಸಭೆ ಸೆಷನ್ನಿನಲ್ಲಿ ಇರಲಿಲ್ಲ. ಈ ಆರ್ಡಿನೆನ್ಸನ್ನು ರಿಪ್ಲೇಸ್ ಮಾಡುವ ದೃಷ್ಟಿಯಿಂದ ಈ ಬಿಲ್ಲನ್ನು ತಮ್ಮ ಮುಂದೆ ತಂದಿದೆ. ಈ ಸಭೆಯ ಮಾನ್ಯ ಸದಸ್ಯರು ಅದಕ್ಕೆ ಒಪ್ಪಿಗೆ ಕೊಡುತ್ತಾರೆಂಬ ಭರವಸೆ ನನಗಿದೆ.

* * * * *

# ಶರಾವತಿ ಯೋಜನೆ – ಪರಿಹಾರಗಳು*

**ಎಂ.ವಿ. ಕೃಷ್ಣಪ್ಪನವರು** ಅಬ್ಕಾರಿ, ಕಂದಾಯ ಹಾಗೂ ಪಶುಸಂಗೋಪನಾ ಸಚಿವರಾಗಿದ್ದರು. ಈ ಸಂದರ್ಭದಲ್ಲಿ ಉತ್ತರದಲ್ಲಿ ಶರಾವತಿ ಯೋಜನೆಯ ಕಾರ್ಯಗಳು ಆರಂಭವಾಯ್ತು. ಇದಕ್ಕೆ ಸಂಬಂಧಿಸಿದಂತೆ ವಿಧಾನಸಭೆಯಲ್ಲಿ ಬಿಸಿ ಬಿಸಿ ಚರ್ಚೆಗಳಾಯ್ತು.

ಶರಾವತಿ ಯೋಜನೆಯಿಂದ ಸುಮಾರು ಮೂವತ್ತು ನಲವತ್ತು ಗ್ರಾಮಗಳು ಮುಳುಗಡೆಯಾಗಬಹುದೆಂದು ಅಂದಾಜು ಮಾಡಲಾಗಿದೆ. ಈ ಯೋಜನೆಗೆ ಸಂಬಂಧಿಸಿದಂತೆ ಶ್ರೀ ಎಂ.ವಿ.ಕೆ.ರವರು ಒಬ್ಬ ಜಿಲ್ಲಾಧಿಕಾರಿಗಳನ್ನು ಪ್ರತ್ಯೇಕವಾಗ Rehabilitation ಸಲುವಾಗಿ ನೇಮಕ ಮಾಡಿದರು.

ಜಿಲ್ಲಾಧಿಕಾರಿಗಳ ಕರ್ತವ್ಯ ಶರಾವತಿ ಯೋಜನೆಯಿಂದ ಭೂಮಿ, ಮನೆ ಕಳೆದುಕೊಂಡವರಿಗೆ ಭೂಮಿ ಹಂಚುವುದು, ಮೂಲಭೂತ ಸೌಕರ್ಯಗಳನ್ನು ವ್ಯವಸ್ಥೆ ಮಾಡಿಕೊಡುವುದು. ಶ್ರೀ ಎಂ.ವಿ.ಕೆ.ರವರು ನೀಡಿದ ವರದಿ ಪ್ರಕಾರ **"ಈ ಪ್ರಾಜೆಕ್ಟ್‌ನಿಂದ ಸುಮಾರು 30-40 ಗ್ರಾಮಗಳು ಮುಳುಗುತ್ತವೆ, ಸುಮಾರು 13,000 ಎಕರೆ ಭೂಮಿ ಮುಳುಗಡೆಯಾಗಬಹುದು. ಈ ಕಾರಣದಿಂದ ಈಗಾಗಲೇ 15,000 ಎಕರೆ ಭೂಮಿಯನ್ನು ನೀಡುವುದಕ್ಕೆ ಎಲ್ಲಾ ವ್ಯವಸ್ಥೆ** ಮಾಡಲಾಗಿದೆ. **7,500 ಎಕರೆ ಭೂಮಿಯನ್ನು ಭದ್ರಾವತಿ, ತರೀಕೆರೆ ಮತ್ತು ಶಿವಮೊಗ್ಗ ಈ ತಾಲ್ಲೂಕುಗಳಲ್ಲಿ ಹಂಚಲಾಗಿದೆ. ಇನ್ನೂ ಎಲ್ಲಿ ಹಂಚಲು ಸಾಧ್ಯವಿದೆಯೋ ಅಲ್ಲೆಲ್ಲಾ ಹಂಚಲಾಗುವುದು"** ಎಂದು ಪರಿಹಾರಗಳ ಬಗ್ಗೆ ಶ್ರೀ ಎಂ.ವಿ.ಕೆ ರವರು ವಿಧಾನಸಭೆಯಲ್ಲಿ ಸಂಕ್ಷಿಪ್ತ ಉತ್ತರ ನೀಡಿದರು.

* * * * *

---

* ವಿಧಾನಸಭೆ

# ಏಕರೂಪ ಭೂ ಕಂದಾಯ ಕಾಯ್ದೆ *

**ಎಂ.ವಿ. ಕೃಷ್ಣಪ್ಪನವರು ಕಂದಾಯ ಸಚಿವರಾಗಿದ್ದಾಗ ಮೈಸೂರು ಭೂ ಕಂದಾಯ ನಿಯಮಾವಳಿಯನ್ನು ಜಾರಿಗೆ ತರುವುದಕ್ಕೆ ಸಂಬಂಧಿಸಿದಂತೆ ವಿಧಾನಸಭೆಯಲ್ಲಿ ಮಂಡನೆಯನ್ನು ಮಂಡಿಸಿದರು. ಜೊತೆಗೆ 'ಏಕರೂಪ ಭೂ ಕಂದಾಯ' ಹಾಗೂ 'ಭೂಮಿಯ ಆಡಳಿತ'ಕ್ಕೆ ಸಂಬಂಧಿಸಿದಂತೆ ಶ್ರೀಯುತರ ಭಾಷಣ.**

**ಶ್ರೀ ಎಂ.ವಿ. ಕೃಷ್ಣಪ್ಪ (ಕಂದಾಯ ಸಚಿವರು):** ಸ್ವಾಮಿ, ಈಗ ಸಂಸ್ಥಾನ ವೇಳೆ ಜಾರಿಯಲ್ಲಿರುವ ಭೂಕಂದಾಯ ಮತ್ತು ಭೂಮಿಯ ಆಡಳಿತಕ್ಕೆ ಸಂಬಂಧಪಟ್ಟ ಕಾನೂನುಗಳು ಈ ಕನ್ನಡ ರಾಜ್ಯದಲ್ಲಿ ಸೇರಿರತಕ್ಕ ಐದು ಭಾಗಗಳಲ್ಲಿ ಬೇರೆ ಬೇರೆ ರೀತಿಯಾಗಿವೆ. ಹಳೆಯ ಮೈಸೂರು ಭಾಗದಲ್ಲಿ ಸುಮಾರು 80 ವರ್ಷಗಳ ಹಿಂದೆ ಮಾಡಿದ Land Revenue Code ಜಾರಿಯಲ್ಲಿದೆ. ಸ್ವಲ್ಪ ಹೆಚ್ಚು ಕಡಿಮೆ ಬೊಂಬಾಯಿ ಮತ್ತು ಹೈದರಾಬಾದ್ ಭಾಗಗಳಲ್ಲಿ ಕೂಡ ಕೆಲವು ವಿವರಗಳನ್ನು ಬಿಟ್ಟರೆ ಹಳೆಯ ಮೈಸೂರು ಸಂಸ್ಥಾನದಲ್ಲಿದ್ದ ರೀತಿಯಲ್ಲಿಯೇ ಜಾರಿಯಲ್ಲಿದೆ. ಕೊಡಗಿನದೇ ಒಂದು Special feature, ಅವರು ಒಂದು revenue regulation ಮಾಡಿಕೊಂಡು ಅದರ ಪ್ರಕಾರ ನಡೆಸಿಕೊಂಡು ಹೋಗುತ್ತಿದ್ದರು. ಮದ್ರಾಸ್‌ನಿಂದ ಬಂದ ಕನ್ನಡ ಭಾಗಗಳಲ್ಲಿ ರೆವಿನ್ಯೂ ಕೋಡ್ ಅಥವಾ ಒಂದು Codified law ಇಲ್ಲ. ಅಲ್ಲಿ ರೆವೆನ್ಯೂ ಬೋರ್ಡ್ ಎಂದು ಮಾಡಿ special orders ಮಾಡಿಕೊಂಡು Board's standing orders (B.S.O) ಪ್ರಕಾರ ಮದ್ರಾಸಿನಿಂದ ಬಂದ ದಕ್ಷಿಣ ಕನ್ನಡ, ಕೊಳ್ಳೇಗಾಲ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಭೂಕಂದಾಯ ಮತ್ತು ಭೂ ಆಡಳಿತ ಕಾನೂನುಗಳು ನಡೆದುಕೊಂಡು ಹೋಗುತ್ತಿವೆ. ಇವೊತ್ತು ಕನ್ನಡ ದೇಶವೆಲ್ಲಾ ಒಂದಾಗಿದೆ. ಈ ದೇಶದಲ್ಲಿರುವ ಐದು ಭಾಗಗಳಲ್ಲಿಯೂ ಐದು ವಿಧವಾದ ಕಾನೂನುಗಳಿವೆ ಅವನ್ನೆಲ್ಲ ಕ್ರೋಡೀಕರಿಸಿ ಒಂದೇ ವಿಧವಾದ ಕಾನೂನನ್ನು ಈ ಮೊದಲೇ ಮಾಡಬೇಕಾಗಿತ್ತು. ಆದರೆ ಇದು ಭೂಮಿಗೆ ಸಂಬಂಧಪಟ್ಟ ಕಾನೂನು. ಇದನ್ನು ಸರ್ವೆ ಸಾಮಾನ್ಯವಾಗಿ ಸುಮಾರು ನೂರಕ್ಕೆ 80–85 ಜನ ತಿಳಿಯದವರು ಇದ್ದಾರ ಇದರ ಪರಿಣಾಮವಾಗಿ ಅಷ್ಟು ಬೇಗ ಇವರಿಗೆ ತೊಂದರೆ ಮಾಡಬಾರದು. ಸ್ವಲ್ಪ ಹೊಸ ಸಂಸ್ಥಾನಕ್ಕೆ ಹೊಂದಿಕೊಂಡು ಬರುವವರೆಗೆ ಈ ಕಾನೂನು ಬೇರೆ ಬೇರೆ ರೀತಿಯಲ್ಲಿ ಬಂದದ್ದನ್ನು ಹಾಗೇ ನಡೆದುಕೊಂಡು ಬರಲಿ ಎನ್ನುವ ಉದ್ದೇಶದಿಂದ ಈವರೆಗೂ ನಮ್ಮ ದೇಶದಲ್ಲಿ ಹೈದರಾಬಾದಿನ ಭಾಗದ ಕಾನೂನು ಹಾಗೇ ಇದೆ. ಕೊಡಗಿನ ಭಾಗದ ಕಾನೂನು ಹಾಗೆ ಇದೆ. ಬೊಂಬಾಯಿ ಭಾಗದ ಕಾನೂನು ಹಾಗೇ ಇದೆ. ಹೀಗೆ ಬೇರೆ ಬೇರೆಯಾದ

---

* ವಿಧಾನಸಭೆ– 1962

ಕಾನೂನುಗಳನ್ನು ಸೇರಿಸಿ ಸಂಸ್ಥಾನವುಳೆ ಒಂದೇ ರೀತಿಯಾದ ಏಕರೂಪವಾದ ಕಾನೂನನ್ನು ಮಾಡಬೇಕೆಂದಿತ್ತು. ಕನ್ನಡ ದೇಶವೆಲ್ಲಾ ಒಂದಾಗಿ ಸುಮಾರು ಆರೇಳು ವರ್ಷಗಳಾದವು. ಇನ್ನೂ ಏನೂ ಮಾಡಲಿಲ್ಲ. ಇದು ಬಹಳ ಮುಖ್ಯವಾದ ಮತ್ತು ತ್ವರಿತವಾಗಿ ಮಾಡಬೇಕಾದ ಕಾನೂನಾಗಿತ್ತು ಎಂದು ನನಗೂ ಅನಿಸಿತ್ತು. ಇದರಿಂದ ಅವಶ್ಯಕತೆ ಇದೆ ಎಂದು ಈ ಲ್ಯಾಂಡು ರೆವಿನ್ಯೂ ಕೋಡನ್ನು ಈ ಸಭೆಯ ಮುಂದೆ ತರಲಾಗಿದೆ. ಇದರಲ್ಲಿ ಸುಮಾರು 15 chapters ಮತ್ತು 200 ಕ್ಲಾಸುಗಳಿವೆ. ಮುಖ್ಯವಾದ ನಾಲ್ಕೈದು ವಿಚಾರಗಳನ್ನು ಈ ಸಭೆಯ ಗಮನಕ್ಕೆ ತರುತ್ತೇನೆ.

ಮೊದಲನೆಯದಾಗಿ ಭೂಮಿಯ ಆಡಳಿತವೂ ಬಹಳ ಬದಲಾವಣೆಯಾಗಿದೆ. ಭೂಕಂದಾಯದ ವಿಷಯವನ್ನು ಹೇಳಬೇಕೆಂದರೆ ಭೂಮಿಯ ಪದ್ಧತಿಯೂ ಕೂಡ ಬೇರೆ ಪ್ರಾಂತ್ಯದಿಂದ ಬಂದಿರುವುದರಿಂದ ಅದಕ್ಕೆ ಸಂಬಂಧಪಟ್ಟ ಆಡಳಿತದಲ್ಲೂ ಬಹುಮಟ್ಟಿಗೆ ಬದಲಾವಣೆಯಾಗಬೇಕಾಗಿದೆ. ಈಗ ಪ್ರತಿಯೊಂದು ಜಿಲ್ಲೆಯಲ್ಲಿಯೂ ಒಬ್ಬರೇ ಜಿಲ್ಲಾಧಿಕಾರಿಗಳು ಇರುತ್ತಾರೆ. ಜಿಲ್ಲೆಯ ಎಲ್ಲಾ ಕೆಲಸ ಕಾರ್ಯಗಳಿಗೂ ಅವರೇ ಜವಾಬ್ದಾರರಾಗಿರುತ್ತಾರೆ. ಈಗ ಅವರಿಗೆ ಕೆಲಸ ಕಾರ್ಯಗಳು ಹೆಚ್ಚಾಗಿ ಅವರ ಕ್ಷೇತ್ರ ಬಹಳ ದೊಡ್ಡವಾಗಿದೆ. ಜಿಲ್ಲಾಧಿಕಾರಿಗಳು ಬಹುಮಟ್ಟಿಗೆ Developmental Activitiesಗಳ ಕಡೆಗೆ ಗಮನಕೊಡಬೇಕಾಗಿದೆ. ಅಭಿವೃದ್ಧಿ ಕೆಲಸಗಳಿಗೇ ಹೆಚ್ಚಾಗಿ ಗಮನಕೊಡಬೇಕಾಗಿ ಬಂದಿರುವುದರಿಂದ ರೆವೆನ್ಯೂ ಬಾಬಿನ ಕೆಲಸಗಳನ್ನು ಮಾಡಲು ಹೆಚ್ಚಿನ ಕಾಲ ಸಿಕ್ಕುವುದಿಲ್ಲ. ಅದೂ ಅಲ್ಲದೆ ಕೆಲವು ಜಿಲ್ಲೆಗಳು ದೊಡ್ಡದಾಗಿವೆ. ಜಿಲ್ಲೆಯ ಆಡಳಿತ ಕ್ಷೇತ್ರವೂ ಬಹಳ ವಿಸ್ತಾರವಾಗಿದೆ. ಅದರಿಂದ ಅನೇಕ ಹೊಸ ಹೊಸ ರೀತಿಯ ಜವಾಬುದಾರಿಗಳನ್ನು ಅವರಿಗೆ ವಹಿಸಲಾಗಿದೆ. ಕೆಲವು ಜಿಲ್ಲೆಗಳಲ್ಲಿ ಪ್ಯಾಕೇಜ್ ಡೀಲ್ ಬಂದಿದೆ. ಪ್ಯಾಕೇಜ್ ಡೀಲ್‌ನ್ನು ತಂದು ರೈತರಿಗೆ ಬೇಕಾಗುವ ಗೊಬ್ಬರ ಮತ್ತು ವ್ಯವಸಾಯೋಪಕರಣಗಳನ್ನು ಕೊಟ್ಟು ಅಭಿವೃದ್ಧಿ ಮಾಡಬೇಕೆಂದು ಈ ಸ್ಕೀಂನ್ನು ತೆಗೆದುಕೊಂಡಿದ್ದೇವೆ. ಈಗಾಗಲೇ ಮಂಡ್ಯ ಜಿಲ್ಲೆಯಲ್ಲಿ ಈ ಪ್ಯಾಕೇಜು ಡೀಲ್ ಯೋಜನೆ ನಡೆಯುತ್ತಿದೆ. ಅದೇ ರೀತಿ ಮುಂದೆ ಮಂಗಳೂರು, ಶಿವಮೊಗ್ಗ, ಹೀಗೆ ಎಲ್ಲಾ ಪ್ರಾಂತದಲ್ಲೂ ತಂದು ವ್ಯವಸಾಯ ಮಾಡುವುದಕ್ಕೆ ಅನುಕೂಲ ಮಾಡಬೇಕೆಂದಿದೆ. ಈ ರೀತಿ ಎಲ್ಲ ಜಿಲ್ಲೆಗಳಿಗೂ ಇದನ್ನು ತರುವ ಸಂಭವವಿದೆ. ನಾನು ಹಿಂದೆ ಸೆಂಟ್ರಲ್ ಗವರ್ನ್‌ಮೆಂಟಿನಲ್ಲಿ ಮಿನಿಸ್ಟರಾಗಿ ಇದ್ದಾಗ ಈ ಪ್ಯಾಕೇಜು ಡೀಲ್ ಸ್ಕೀಂನ್ನು ಹಿಂದುಸ್ತಾನದಲ್ಲೆಲ್ಲಾ ತರುವ ಉದ್ದೇಶವಿದೆ ಎಂದು ಹೇಳಲಾಗಿತ್ತು. ಅದೇ ರೀತಿ ನಮ್ಮ ಸಂಸ್ಥಾನದಲ್ಲೂ ಕೆಲವು ಜಿಲ್ಲಾಧಿಕಾರಿಗಳು ಪ್ಯಾಕೇಜು ಡೀಲನ್ನು ಅನ್ವಯಿಸುತ್ತಿದ್ದಾರೆ ಪೂರ್ವದಲ್ಲಿ ನಮ್ಮ ರೆವೆನ್ಯೂ ಆಡಳಿತದಲ್ಲಿ ಈ ರೀತಿಯಾದ ಡೆವಲಪ್‌ಮೆಂಟಲ್ ಅಕ್ಟಿವೇಟೀಸ್‌ಗಳು ಇರಲಿಲ್ಲ. ಎನ್.ಇ.ಎಸ್ ಬ್ಲಾಕುಗಳಿರಲಿಲ್ಲ. ಈಗ ಈ ಮೂರು ಆಡಳಿತಗಳು ಜಿಲ್ಲಾಧಿಕಾರಿಗಳಿಗೇ ಸೇರಿದೆ ಕೆಲವು ಕಡೆ ಜಿಲ್ಲಾಧಿಕಾರಿಗಳಿಗೆ ಕಾಗದಗಳನ್ನು ಸೈನು ಮಾಡುವುದಕ್ಕೂ ಸೌಕರ್ಯಗಳಿಗೆ ಬಹಳ ತೊಂದರೆಯಾಗಿದೆ. ಅನೇಕ ಜಿಲ್ಲೆಗಳಿಗೆ ಅಡಿಷನಲ್ ಡೆಪ್ಯುಟೀ ಕಮಿಷನರುಗಳು ಬೇಕಾಗಿದೆ. ಅದರಲ್ಲೂ ಹೊಸ ಪ್ರಾಂತ್ಯವವಾದ ಮೇಲೆ ನಮಗೆ ಬಂದಿರುವ ಧಾರವಾಡ ಬೆಳಗಾಂ ಮತ್ತು ಮಂಗಳೂರು ಜಿಲ್ಲೆಗಳು ಬಹಳ ದೊಡ್ಡ ಜಿಲ್ಲೆಗಳು ಮೈಸೂರಿಗೆ

ಬಂದು ಸೇರಿವೆ. ಹಿಂದಿದ್ದ ರೆವೆನ್ಯೂ ಕೋಡಿನಲ್ಲಿ ಅಡಿಷಿನಲ್ ಡೆಪ್ಯುಟೀ ಕಮೀಷನರುಗಳನ್ನು ನೇಮಕ ಮಾಡುವುದಕ್ಕೆ ಅಧಿಕಾರವಿರಲಿಲ್ಲ. ಅದಕ್ಕಾಗಿ ಒಂದು ಆಕ್ಟನ್ನು ಮಾಡಿ ಇತ್ತೀಚೆಗೆ ಅಡಿಷನಲ್ ಡೆಪ್ಯುಟಿ ಕಮೀಷನರನ್ನು ಅಪಾಯಿಂಟು ಮಾಡಬಹುದು ಎಂದು ಈ ಸಭೆ ಒಪ್ಪಿಗೆಯನ್ನು ಕೊಟ್ಟಿತ್ತು. ಇದೇ ರೀತಿ ತಾಲ್ಲೂಕುಗಳಲ್ಲಿರುವ ತಹಶೀಲುದಾರರಿಗೂ ಅವರ ಜವಾಬುದಾರಿಗಳು ಜಾಸ್ತಿಯಾಗುತ್ತಿವೆ. ಅದೂ ಅಲ್ಲದೆ ಕೆಲವು ಕಡೆ ತಾಲ್ಲೂಕುಗಳ ತಹಶೀಲುದಾರರುಗಳಿಗೆ ಅಕ್ವಿಜೇಷನ್ನು ಕೇಸುಗಳು, ಇನಾಂತಿಯ ರದ್ದಿಯಾತಿ, ಇತ್ಯಾದಿ ಕೆಲಸಗಳನ್ನು ನಿರ್ವಹಿಸಿರುವುದರಿಂದ ಅನೇಕ ತಾಲ್ಲೂಕುಗಳಲ್ಲಿ ಅವರ ಭಾರ ಜಾಸ್ತಿಯಾಗುತ್ತಿದೆ. ಅಂತಹ ಸಂದರ್ಭ ಬಂದರೆ ಡೆಪ್ಯುಟೀ ತಹಶೀಲುದಾರರುಗಳನ್ನು ನೇಮಕ ಮಾಡಿಕೊಳ್ಳಬಹುದು ಎಂದು ಈ ರೆವೆನ್ಯೂ ಕೋಡಿನಲ್ಲಿದೆ. ಎಲ್ಲೆಲ್ಲಿ ಅವಶ್ಯಕತೆ ಇದೆಯೋ ಅಲ್ಲೆಲ್ಲಾ ಅಡಿಷನಲ್ ತಹಶೀಲುದಾರರುಗಳು ಇರಬಹುದು ಎನ್ನುವ ಅವಕಾಶವನ್ನು ಇಲ್ಲಿ ಒದಗಿಸಿಕೊಟ್ಟಿದೆ. ಈಗ ಡೆಪ್ಯುಟಿ ತಹಶೀಲುದಾರರ ಹುದ್ದೆಗಳಿಲ್ಲ.

ಎರಡನೆಯದಾಗಿ ಮುಖ್ಯವಾದುದು ಮೈಸೂರು ಸಂಸ್ಥಾನದಲ್ಲಿ ರೆವೆನ್ಯೂ ಅಪಲೇಟ್ ಟ್ರಿಬ್ಯುನಲ್ ಇಲ್ಲದಿರುವುದು, ಈಗಿರುವ ಟ್ರಿಬ್ಯುನಲ್‌ನಲ್ಲಿ ಕೆಲವು ಫಂಕ್ಷನ್ನುಗಳು ಸ್ಪೆಸಿಫಿಕ್ ಆಗಿಲ್ಲ. ಇದರಲ್ಲೂ ಕೆಲವು ನ್ಯೂನತೆಗಳಿರುವುದರಿಂದ ಸ್ವಲ್ಪ ತೊಂದರೆ ಇದೆ. ಹಿಂದೆ ಇದ್ದ ರೆವೆನ್ಯೂ ಕೋಡಿನಲ್ಲಿ ಇದಿರಲಿಲ್ಲ. ಈಗಿರುವ ಕೋಡಿನಲ್ಲಿ ಇದನ್ನೆಲ್ಲಾ ಸೇರಿಸಿ ರೆವೆನ್ಯೂ ಟ್ರಿಬ್ಯುನಲ್ಲಿನ ಡೆಫಿನಿಷನ್ನು ಅದರ ಕಾರ್ಯಕ್ಷೇತ್ರ ಎಲ್ಲವನ್ನೂ ಡಿಫೈನು ಮಾಡಿಬಿಟ್ಟಿದ್ದೇವೆ.

ಮೂರನೇಯದು ಬಹಳ ಮುಖ್ಯವಾದುದು ಸೆಟಲ್‌ಮೆಂಟಿಗೆ ಸಂಬಂಧಪಟ್ಟುದು. ಈಗ ಮೈಸೂರು ಸಂಸ್ಥಾನದಲ್ಲಿ ಭೂಕಂದಾಯದ ಪದ್ಧತಿ ಬೇರೆ ಬೇರೆ ರೀತಿಯಲ್ಲಿರುವುದು ತಮಗೂ ಗೊತ್ತು. ಕೆಲವು ಕಡೆ ಹೊಸದಾಗಿ ಬಂದಿರುವ ಪ್ರಾಂತದಲ್ಲಿ ಕಂದಾಯ ಹೆಚ್ಚು ಕೊಡುತ್ತಿದ್ದಾರೆ ಸೌತ್ ಕೆನರಾ ಮತ್ತು ಬೆಳಗಾಂ ಡಿವಿಜನ್ ಜನರು ಹೆಚ್ಚಾಗಿ ಕಂದಾಯ ಕೊಡುತ್ತಿದ್ದಾರೆ. ಹಳೆಯ ಮೈಸೂರಿನ 9 ಜಿಲ್ಲೆಗಳಲ್ಲಿ ಒಂದೆರಡು ಜಿಲ್ಲೆಗಳನ್ನು ಬಿಟ್ಟರೆ ನಮ್ಮ ಕೋಲಾರ ಜಿಲ್ಲೆಯಲ್ಲೇ ಜನ ಹೆಚ್ಚಾಗಿ ಕಂದಾಯ ಕೊಡುತ್ತಿದ್ದಾರೆ. ಈ ಹಿಂದೆ ಕೋಲಾರ ಜಿಲ್ಲೆಗೆ ಒಂದು ಕಲ್ಲನ್ನಿಡಲು ಸರ್ವೇಯರುಗಳು ಬಂದಾಗ ಅವರಿಗೆ ಕೋಳಿ ಕುಯ್ದು ಕೊಡಲಿಲ್ಲ ಎಂದು ಆಗ ಕೋಲಾರ ಜಿಲ್ಲೆಯ ಜನರ ಮೇಲೆ ಜಾಸ್ತಿ ಕಂದಾಯ ಮಾಡಿದರು ಎನ್ನುವ ಒಂದು ಮಾತನ್ನು ಹೇಳುತ್ತಾರೆ. ನಮ್ಮ ಹಿಂದೂಸ್ಥಾನಕ್ಕೆ ಬೇಕಾದ ಚಿನ್ನವೆಲ್ಲಾ ನಮ್ಮ ಕೋಲಾರ ಜಿಲ್ಲೆಯಲ್ಲೇ ಸಿಕ್ಕುತ್ತಿದೆ ಎಂದೂ ಇದು rich district ಆಗಿದೆ ಎಂದೂ ಈ ಜಿಲ್ಲೆಯ ಜನಗಳ ಮೇಲೆ ಹೆಚ್ಚಿನ ಕಂದಾಯ ಹಾಕಿದರು ಎಂದೂ ಹೇಳುತ್ತಾರೆ. ಆದುದರಿಂದ ಸಂಸ್ಥಾನಾಮಳೆ ಏಕರೂಪವಾದ ಮತ್ತು ಶಾಸ್ತ್ರೀಯವಾದ (scientific) ರೀತಿಯಲ್ಲಿಲ್ಲ. ಭೂಮಿಯ ಸಾರ ಎಂದರೆ fertility ಮತ್ತು ಅದರ ಸನ್ನಿವೇಶಗಳನ್ನೆಲ್ಲ ನೋಡಿಕೊಂಡು ಕಂದಾಯ ಹಾಕಬೇಕಾದ್ದು ನ್ಯಾಯ. ಅದಕ್ಕೋಸ್ಕರ ಈ ಸರ್ವೆ ರೀಸೆಟಲ್‌ಮೆಂಟು ಕೆಲಸವನ್ನು ಪೂರ್ತಿ ಮಾಡಬೇಕೆಂದು ಪ್ರಯತ್ನ ಮಾಡುತ್ತಿದ್ದೇವೆ. ಈಗಾಗಲೇ ಮುಕ್ಕಾಲು ಭಾಗದ

ಕೆಲಸ ಮುಗಿದಿದೆ. ಇನ್ನು ಒಂದು, ಒಂದೂವರೆ ವರ್ಷಗಳಲ್ಲಿ ಈ ಕೆಲಸ ಮುಗಿಸಬೇಕೆಂದು ಕಾರ್ಯಕ್ರಮ ಹಾಕಿಕೊಂಡು ಸರಕಾರದವರು ಆತುರಾತುರವಾಗಿ ಮಾಡುತ್ತಿದ್ದಾರೆ. ಇದು ನಿಧಾನವಾಗಲು ಸಂಸ್ಥಾನದಲ್ಲಿ ಹೆಚ್ಚಿಗೆ ಹಣದ ಅಭಾವವಿತ್ತು ಎಂದು ತಮಗೂ ಗೊತ್ತೇ ಇದೆ. ಮಾನ್ಯ ಸದಸ್ಯರಿಗೆ ಗೊತ್ತಿರುವ ಹಾಗೆ ರೈತರ ಮೇಲೆ ಈಗಾಗಲೇ ರೆವಿನ್ಯೂ ಸರ್‌ಚಾರ್ಜ್‌ನ್ನು ವಿಧಿಸಲಾಗಿದೆ. ಈ ಸರ್‌ಚಾರ್ಜು ಹೋಗಬೇಕಾದರೆ, ನಾವು ಸೈಂಟಿಫಿಕ್ ಬೇಸಿಸ್ಸಿನ ಮೇಲೆ ಕಂದಾಯ ಹಾಕಬೇಕೆಂದು ಈ ಸರ್ವೆ ಸೆಟಲ್‌ಮೆಂಟನ್ನು ಆದಷ್ಟು ಬೇಗ ಮುಗಿಸುತ್ತಿದ್ದೇವೆ. ಈ ಕಾನೂನಿನಿಂದ ನ್ಯಾಯವಾದ ಮತ್ತು ಶಾಸ್ತ್ರೀಯವಾದ ಕಂದಾಯವನ್ನು ವಿಧಿಸಬೇಕೆಂದಿದೆ. ಸಾಮಾನ್ಯವಾಗಿ ಡ್ರೈರೇಟುಗಳನ್ನು ಹಾಕಬೇಕೆಂದಿದ್ದೇವೆ. ಸುಮಾರು ಮೂರು ಕೋಟಿ ಎಕರೆಗಳಷ್ಟು ಭೂಮಿಯಲ್ಲಿ 70–80 ಲಕ್ಷ ಎಕರೆಗಳಿಗೆ dry assessment rates per acreಗೆ ಇಷ್ಟು ಎಂದು ನಿಗದಿ ಮಾಡಬೇಕಾಗಿದೆ. ಸೈಂಟಿಫಿಕ್ ಆಗಿ ಭೂಕಂದಾಯ ಫಿಕ್ಸ್ ಮಾಡುವುದರಿಂದ ಸುಮಾರು ಮೂರು–ನಾಲ್ಕು ಕೋಟಿ ರೂಪಾಯಿ ಉತ್ಪನ್ನ ಜಾಸ್ತಿ ಬರುತ್ತದೆ. ಭೂಕಂದಾಯ ಗೊತ್ತು ಮಾಡುವಾಗ ವೆಟ್, ಸೆಮಿವೆಟ್, ಗಾರ್ಡನ್‌ಲ್ಯಾಂಡ್ಸ್ ಎಂದು ವಿಭಾಗ ಮಾಡಲಾಗುವುದು ಒಂದು ಎಕರೆ ಕಾಫಿ, ಅಡಕೆ ತೋಟದಲ್ಲಿ ಹೆಚ್ಚು ಸಂಪಾದನೆಯಾಗುವುದರಿಂದ ಜಾಸ್ತಿ ಕಂದಾಯ ಕೊಡಬೇಕಾಗುವುದು. ಒಂದು ಎಕರೆ ಭೂಮಿಯಲ್ಲಿ ಭತ್ತ ಬೆಳೆದರೆ ಕಡಿಮೆ ಸಂಪಾದನೆಯಾಗುವುದರಿಂದ ಕಡಿಮೆ ಕಂದಾಯ ಕೊಡಬೇಕಾಗುತ್ತದೆ. ಆದ್ದರಿಂದ ಸೈಂಟಿಫಿಕ್ ಆಗಿ ಕಂದಾಯ ಹಾಕಲಾಗುವುದು. ಇದರಿಂದ ಮೂರು–ನಾಲ್ಕು ಕೋಟಿ ರೂಪಾಯಿ ಹೆಚ್ಚು ಉತ್ಪನ್ನ ಬರುವುದು. ಈಗ ಹಾಕಲಾಗಿರುವ ಸರ್‌ಚಾರ್ಜ್ ಆಗಿಯೇ ತೆಗೆದುಹಾಕಬಹುದು. ನ್ಯಾಯವಾದ ರೀತಿಯಲ್ಲಿ ಸರ್ವೇ ಸೆಟಲ್‌ಮೆಂಟ್ ಆದ ಮೇಲೆ ಅಸೆಸ್‌ಮೆಂಟ್ ಹಾಕಲಾಗುವುದು ಅದಕ್ಕೆ ಇನ್ನೂ ಅವಧಿ ಬೇಕು. ಅದಕ್ಕಾಗಿ ಈಗ ತುರ್ತು ಪರಿಸ್ಥಿತಿಯಲ್ಲಿ ಸರ್‌ಚಾರ್ಜ್ ಹಾಕಬೇಕಾಗಿದೆ. ಇದು ಆದಷ್ಟು ಬೇಗ ಹೋಗಬೆಕು. ಅಂದರೆ ಸರಿಯಾಗುತ್ತದೆ. ರಿಕಾರ್ಡ್ ಆಫ್ ರೈಟ್ಸ್‌ಗಳಲ್ಲಿ ನ್ಯೂನತೆಗಳು ಇವೆ. ಅವುಗಳನ್ನು ಸರಿಪಡಿಸುತ್ತೇವೆ. ಇನ್ನು ಹಳ್ಳಿಗಳಲ್ಲಿ ಎಲ್ಲೆಯ (ಬೌಂಡರೀಜ್) ವಿಷಯದಲ್ಲಿ ಇಲ್ಲಿಯವರೆಗೆ ಯಾರ ಮೇಲೂ ಜವಾಬ್ದಾರಿಯಿರಲಿಲ್ಲ. ಈಗ ಜವಾಬ್ದಾರಿ ಹೊರಿಸುತ್ತೇವೆ. ಎಲ್ಲಾದರೂ ಬೌಂಡರಿ ಕಲ್ಲು ಕಿತ್ತಿದ್ದರೆ ಗ್ರಾಮಾಧಿಕಾರಿಗಳು ಜವಾಬ್ದಾರರಾಗಬೇಕಾಗುತ್ತದೆ. ಸಧ್ಯಕ್ಕೆ ಬೇರೆ ಬೇರೆ ಪ್ರದೇಶದಲ್ಲಿ ಬೇರೆ ಬೇರೆ ಕಾನೂನು ಜಾರಿಯಲ್ಲಿದೆ. ಬೆಂಗಳೂರು ಸಿಟಿಯಲ್ಲಿ ಸರ್ವೆಯಾಗಿಲ್ಲ. ಇದರಿಂದ ಜನರಿಗೆ ತೊಂದರೆಯಾಗಿದೆ. ಸರ್ವೆ ಮಾಡುವುದು ಬಹಳ ಅಗತ್ಯವಾಗಿದೆ. ನಮ್ಮ ತಾತಂದಿರಾದ ನರಸಿಂಹಗೌಡರ ಕಾಲದಲ್ಲಿ ರಂಗಾಚಾರ್ಲು ದಿವಾನರಾಗಿದ್ದಾಗ ಯಾವ ರೀತಿಯಾಗಿ ಇದ್ದಿತೋ ಅದೇ ರೀತಿಯಾಗಿ ಇಂದಿನವರೆಗೆ ನಡೆದುಕೊಂಡು ಬಂದಿದೆ. ಅವರ ಮೊಮ್ಮಗನಾದ ನಾನು ಈಗ ತಿದ್ದುಪಡಿ ಮಾಡಬೇಕಾಗಿದೆ. ಆದುದರಿಂದ ಈಗ ಈ ಮಸೂದೆಯನ್ನು ಸಭೆಯ ಮುಂದೆ ಇಡುತ್ತೇನೆ. ಮಾನ್ಯ ಸದಸ್ಯರು ಈ ಮಸೂದೆಯನ್ನು ಒಪ್ಪಬೇಕು ಎಂದು ಕೇಳಿಕೊಳ್ಳುತ್ತೇನೆ.

* * * * *

# ಭೂ ಸುಧಾರಣೆ ಮಸೂದೆ (ತಿದ್ದುಪಡಿ)

# 1963

**ಎಂ.ವಿ. ಕೃಷ್ಣಪ್ಪ ಅವರು ಭೂ ಸುಧಾರಣೆಗೆ ಸಂಬಂಧಿಸಿದಂತೆ ಪ್ರತಿವರ್ಷ 'ತಿದ್ದುಪಡಿ' ಮಾಡಿ ಜಾರಿಗೆ ತರುತ್ತಿದ್ದುದ್ದು ಅದಕ್ಕೆ ಸಂಬಂಧಿಸಿದಂತೆ ವಿರೋಧ ಪಕ್ಷದವರ ವಿರೋಧ, ಪರ ಚರ್ಚೆಗಳು ಸಹಜ. ಆದರೆ ವಿರೋಧ ಪಕ್ಷದ ಶ್ರೀ ಮುಕ್ಕಣ್ಣಪ್ಪನವರ ಅತಿಯಾದ ನಡವಳಿಕೆಗಳನ್ನು ಗಮನಿಸಿದ ಶ್ರೀ ಎಂ.ವಿ. ಕೃಷ್ಣಪ್ಪನವರು ಅವರಿಗೆ ನೀಡಿದ ಉತ್ತರ.**

**ಶ್ರೀ ಎಂ.ವಿ. ಕೃಷ್ಣಪ್ಪ (ಕಂದಾಯ ಸಚಿವರು):** ಮಾನ್ಯ ಅಧ್ಯಕ್ಷರೇ, ಈ ತಿದ್ದುಪಡಿಯ ಬಗ್ಗೆ ಮಾಡಿರತಕ್ಕ ಚರ್ಚೆಗೆ ಅಷ್ಟೇನೂ ಹೆಚ್ಚಿಗೆ ಉತ್ತರ ಕೊಡಬೇಕಾದ ಅವಶ್ಯಕತೆ ಇರಲಿಲ್ಲ. ಆದರೆ ಶ್ರೀ ಮುಕ್ಕಣ್ಣಪ್ಪನವರು ಮಾಡತಕ್ಕ ಭಾಷಣಕ್ಕೆ ಒಂದು ಕಳೆ ಇದೆ. ಆದರೆ ಬೇರೆಯವರು ಮಾಡತಕ್ಕ ಭಾಷಣಗಳಿಗೆ ಅಂಥ ಕಳೆ ಇರಬಾರದು. ಏಕೆಂದರೆ ಶ್ರೀಮಾನ್ ಮುಕ್ಕಣ್ಣಪ್ಪನವರು ಮಾಡುವ ಭಾಷಣಕ್ಕೆ ಇರತಕ್ಕ ಕಳೆ ಎಂದರೆ ಅದು ನಾಟ್ಯಕಳೆ! ಆದಾಗ್ಯೂ ಅವರು ನಮ್ಮ ಭಾಷಣಗಳಲ್ಲಿ ಆ ಕಳೆಯಿದೆ ಎಂದು ಹೇಳುತ್ತಾರೆ. ಆದರೆ ಅದು ಎಷ್ಟರಮಟ್ಟಿಗೆ ನಿಜವೋ ಅದನ್ನು ನಾನು ಹೇಳಲಾರೆ.. ಅವರು ಭಾಷಣ ಮಾಡುವಾಗ ಒಂದು ನಾಟಕವನ್ನೇ ಆಡಿಬಿಡುತ್ತಾರೆ. ಅವರು ಕೈ–ತಲೆ, ಕಾಲು ಆಡಿಸುವುದೇ ಬಹಳ ಜಾಸ್ತಿ ಹಾಗಿರುವಾಗ ಅವರು ನಮಗೆ ಈ ವಿಚಾರದಲ್ಲಿ ಬುದ್ಧಿ ಹೇಳತಕ್ಕ ಮಟ್ಟದಲ್ಲಿಲ್ಲ. ಒಂದು ವೇಳೆ ಇಲ್ಲಿ ಫಿಲಿಂ ಷೂಟಿಂಗ್ ಮಾಡತಕ್ಕ ಯಂತ್ರೋಪಕರಣವಿಟ್ಟು ಅವರು ಭಾಷಣ ಮಾಡುವ ಕಾಲದಲ್ಲಿ ಹೇಗೆ ಕೈ–ಕಾಲು–ತಲೆ ಆಡಿಸುತ್ತಾರೆಂಬುದನ್ನು ಫೋಟೋ ತೆಗಿದಿದ್ದರೆ ಅವರಿಗೆ ಆಗ ಅವರ ವರ್ತನೆಗಳು ಹೇಗಿರುತ್ತವೆಂಬುದು ಗೊತ್ತಾಗುವುದು. ಈ ಹಿಂದೆ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಅಡಿಗೆ ಮಾಡುತ್ತಿದ್ದವನಿಗೆ ಯಾರಿಗೋ ಒಬ್ಬನಿಗೆ ಅಮಲ್ದಾರಿ ಕೆಲಸ ಕೊಟ್ಟಿದ್ದರಂತೆ! ಆ ಕೆಲಸವನ್ನು ಅವನಿಗೆ ಕೊಟ್ಟು "ನೀನು ಜನರಲ್ಲಿ ಸಲಿಗೆಯಿಂದ ಇರಬಾರದು. ಅವರಿಗೆ ಸ್ವಲ್ಪ ಭಯವಾಗುವಂತೆ ಇರಬೇಕು" ಎಂದು ಹೇಳಿದ್ದರಂತೆ. ಅದಕ್ಕೆ ಆತ ನಂಜನಗೂಡಿಗೆ ಅಮಲ್ದಾರನಾಗಿ ಹೋಗುವಾಗ ಮುಖಕೆಲ್ಲಾ ಮಸಿ ಬಳಿದುಕೊಂಡು ಜನರಿಗೆ ಭಯವಾಗುವಂತೆ ಹೋಗಿದ್ದನಂತೆ! ನಾನು ಹಿಂದೆ ಹೇಳಿದ್ದ ವಿಚಾರವನ್ನು ಶ್ರೀ ಮುಕ್ಕಣ್ಣಪ್ಪನವರೂ ಹೀಗೆ ತಿಳಿದುಕೊಂಡಿರುವಂತೆ ಕಾಣುತ್ತದೆ. "ಹಸ್ತೆ ಹಸ್ತೆ ಲಡಾಯಿ ಕರ್‍ನ" ಅಂದರೆ ನಗುನಗುತ್ತಾ ಯುದ್ಧ ಮಾಡಬೇಕು ಎಂದು ದೊಡ್ಡವರು ಮಹನೀಯರೂ ಹೇಳುತ್ತಾರೆ. ಹಾಗೆ ನಾನೂ ಸಹ ಕೆಲವು ವಿಚಾರಗಳನ್ನು ನಗುತ್ತ ಹೇಳಿದ್ದರೆ ಆ ವಿಚಾರವನ್ನು ನಾನು ಲಘುವಾಗಿ ಹೇಳಿದೆನೆಂದು ಅವರು ಅರ್ಥ ಮಾಡಿಕೊಂಡಿದ್ದರೆ, ಅದು ಅವರ ತಪ್ಪು. ನಾನು ಈ ಹಿಂದೆಯೇ ಶ್ರೀ ಮುಕ್ಕಣ್ಣಪ್ಪನವರಿಗೆ ಒಂದು ಮಾತು ಹೇಳಿದ್ದೆ. ಈಗ ಮತ್ತೆ ಅದನ್ನೇ ಅವರಿಗೆ ಹೇಳಬೇಕಾಗಿದೆ.

*"ಎದ್ದೆದ್ದು ಬೀಳುತಿಹೆ, ಗುದ್ದಾಡಿ ಸೋಲುತಿಹೆ!*
*ಗದ್ದಲವ ತುಂಬಿ ಪ್ರಸಿದ್ಧನಾಗುತಿಹೆ!*
*ಉದ್ಧರಿಸುವೆ ಜಗವನೆನ್ನುತಿಹೆ! ನಿನ್ನ ಉದ್ಧಾರವೆಷ್ಟಾಯಿತೋ–ಮಂಕುತಿಮ್ಮ*

ಶ್ರೀ ಡಿ.ವಿ.ಜಿ.ರವರು ಹೇಳಿದ್ದಾರೆ. ಹೀಗೆ ಚರ್ಚೆಯಲ್ಲಿ ಎದ್ದು ಬಿದ್ದು ಸೋಲುತ್ತಿರುವ ಶ್ರೀ ಮುಕ್ಕಣ್ಣಪ್ಪನವರು ಈ ವಿಚಾರದಲ್ಲಿ ನಮಗೆ ಅವರು ಬುದ್ಧಿ ಹೇಳುವ ಪರಿಸ್ಥಿತಿಯಲ್ಲಿಲ್ಲ.

ಈ ಹಿಂದೆ ನಾನು ಬಗರ್ ಸಾಗುವಳಿ ಮಾಡಿದ್ದವರಿಗೇ ಆ ಜಮೀನನ್ನು ಬಿಟ್ಟು ಕೊಡಬೇಕೆಂದು ಎಲ್ಲಿಯೂ ಹೇಳಿಲ್ಲ. ಕೆಲವು ಕ್ಲಿಷ್ಟ ಪರಿಸ್ಥಿತಿಯಲ್ಲಿ ಅಂದರೆ ಜಮೀನ್ದಾರರು ತನಗಿರತಕ್ಕ ಜಮೀನಿನ ವಿಸ್ತೀರ್ಣವೆಷ್ಟು ಎಂಬುದೇ ಗೊತ್ತಿಲ್ಲದೆ ತಿಳಿವಳಿಕೆ ಇಲ್ಲದೆ ಬಗರ್‌ಹುಕುಂನಿಂದ ಜಮೀನನ್ನು ಒತ್ತರಿಸಿಕೊಂಡಿದ್ದರು. ಒಂದು ಎಕರೆಗೆ ಬದಲು ತನ್ನ ಪಕ್ಕದ ಬಂಜರ್ ಜಮೀನಿನಲ್ಲಿ ಮತ್ತೊಂದು ಎಕರೆ ಸೇರಿಸಿ ಮೂರು ಎಕರೆ ಸಾಗುವಳಿ ಮಾಡಿಕೊಂಡು 7 ರಿಂದ 8 ವರ್ಷಗಳ ಅನುಭವ ಪಡೆದಿದ್ದಾಗ, ಅಲ್ಲಿ ಜಮೀನಿಲ್ಲದ ಜನಗಳು ಯಾರೂ ಇಲ್ಲದಿದ್ದರೆ ಅಂತಹ ಸಂದರ್ಭದಲ್ಲಿ ಮಾತ್ರ ಆ ಬಗರ್‌ಹುಕುಂ ಸಾಗುವಳಿ ಮಾಡಿದ್ದ ಜಮೀನನ್ನು ಆ ರೈತನಿಗೆ ಕೊಡಬಹುದು ಎಂದು ಹಿಂದೆ ಹೇಳಿದ ಜ್ಞಾಪಕವಿದೆ. ಅಷ್ಟೇ ವಿನಃ ನಾನು ಎಂದೂ ಲಘುವಾಗಿ ಮಾತನಾಡಿಲ್ಲ. ಈ ದಿವಸ ಈ ಸಭೆಯ ಮುಂದಿಟ್ಟಿರತಕ್ಕ ತಿದ್ದುಪಡಿ ಮಸೂದೆಗಳಲ್ಲಿ ಏನಿದೆ ಎಂಬುದನ್ನು ಸದಸ್ಯರು ಅರ್ಥ ಮಾಡಿಕೊಂಡಿದ್ದರೆ ಅದೆಲ್ಲವೂ ಕೇವಲ ಗೇಣಿದಾರರ ಹಿತರಕ್ಷಣೆಗೇ ವಿನಃ ಬೇರೆ ಅಲ್ಲಾ ಎಂಬುದು ಅವರಿಗೆ ಗೊತ್ತಾಗುತ್ತದೆ. ಈ ದಿವಸ ಈ ಸಭೆಯಲ್ಲಿ ಮಾನ್ಯ ಸದಸ್ಯರು ಯಾರು ಯಾರು ಗೇಣಿದಾರರ ಹಿತರಕ್ಷಣೆ ಮಾಡಬೇಕೆಂದು ವಾದ ಮಾಡಿದ್ದಾರೋ ಆ ಉದ್ದೇಶದಿಂದಲೇ ಸರ್ಕಾರದವರು ಈ ದಿವಸ ಈ ತಿದ್ದುಪಡಿಗಳನ್ನು ಸಭೆ ಮುಂದೆ ಇಟ್ಟಿದ್ದಾರೆ. ಈಗಿರುವಾಗ ಕೆಲವು ಮಾನ್ಯ ಸದಸ್ಯರು ಭೂಸುಧಾರಣೆ ಶಾಸನವಿನ್ನೇನು ಕೇವಲ 5–6 ತಿಂಗಳುಗಳಲ್ಲಿ ಜಾರಿಗೆ ಬರುತ್ತಿತ್ತು. ಅದನ್ನು ಹಿಂದಕ್ಕೆ ತಳ್ಳಿ ಆ ವೇಳೆಯಲ್ಲಿ ಗೇಣಿದಾರರುಗಳನ್ನೆಲ್ಲಾ ಹೋಲ್‌ಸೇಲಾಗಿ ಎವಿಕ್ಟ್ ಮಾಡಿಸಲು ಅವಕಾಶ ಕೊಡುತ್ತಿದ್ದರೆಂಬಂತೆ ಮಾತನಾಡಿದ್ದಾರೆ. ಆದರೆ ಈ ವಾದದಲ್ಲಿ ತಿರುಳಿಲ್ಲ. ಈ ದಿವಸ ಗೇಣಿದಾರರಿಗಿರುವಷ್ಟು ರಕ್ಷಣೆ ಭೂಮಾಲಿಕರಿಗಿಲ್ಲ. ಅನೇಕ ಜಮೀನುದಾರರಿಗೆ ಬಹಳ ತೊಂದರೆಯಾಗಿದೆ. ಗ್ರಾಮ್ಯಭಾಷೆಯಲ್ಲಿ ಹೇಳುವುದಾದರೆ, "ನಾಯಿ ಬಾಲ ಅಲ್ಲಾಡಿಸುವುದಕ್ಕೆ ಬದಲಾಗಿ ಬಾಲವೇ ನಾಯಿಯನ್ನು ಅಲ್ಲಾಡಿಸುವಂತೆ ಆಗಿದೆ" ಎಂದು ಹೇಳಬಹುದು. ಈ ಹಿಂದೆ ಟೆನೆನ್ಸ್ ಜಮೀನುದಾರರ ಮರ್ಜಿ ಕಾಯಬೇಕಾಗಿತ್ತು. ಈಗ ಅದು ಹೋಗಿ ಜಮೀನುದಾರರೇ ಟೆನೆನ್‌ಸ್ಟ್‌ಗಳ ಮರ್ಜಿ ಕಾಯುವ ಕಾಲ ಬಂದಿದೆ. ಗೇಣಿಯನ್ನು ಕ್ಯಾಷ್ ರೂಪದಲ್ಲಿ ತೆಗೆದುಕೊಳ್ಳುವ ಜಮೀನ್ದಾರರ ಕಷ್ಟ ಅಷ್ಟಿಷ್ಟಲ್ಲ. ಈ ಹಿಂದೆ ಏನು 20–25 ರೂ.ಗಳ ಕ್ಯಾಷ್ ಗೇಣಿ ಮೊಕರೂರಾಗಿತ್ತೊ ಈಗಲೂ ಅಷ್ಟೇ ಇದೆ ಅದು. ಹೀಗಾಗಿ ಈ ದಿವಸ ಆ ಜಮೀನುದಾರರು ಆ ಹಣವನ್ನೆಲ್ಲ ಕಂದಾಯ ಮತ್ತು ಸರ್‌ಚಾರ್ಜ್‌ಗಳನ್ನು ಕೊಡಲು ಸಾಲುವುದಿಲ್ಲ. ಇಂತಹ ಪರಿಸ್ಥಿತಿಗಳು ಇವೆ. ಬೆಳೆ ರೂಪದಲ್ಲಿ ಗೇಣಿ ಪಡೆಯತಕ್ಕವರಿಗೆ ಪರವಾಗಿಲ್ಲ. ಇತ್ತೀಚೆಗೆ ಅಡಿಕೆಗೆ ಧಾರಣೆ ಹೆಚ್ಚಿದ ಮೇಲಂತೂ ಭೂಮಾಲಿಕರಲ್ಲಿ ಕ್ಯಾಷ್ ರೂಪದಲ್ಲಿ ಗೇಣಿ ತೆಗೆದುಕೊಳ್ಳುವವರಿಗೆ ಬಹಳ ತೊಂದರೆಯಾಗಿದೆ. ಆದಾಗ್ಗೂ ನಾವು ಈಗ ಕೇವಲ ಗೇಣಿದಾರರ ಹಿತರಕ್ಷಣೆ ಮಾಡಿದ್ದೇವೆ. ಹೀಗಿದ್ದರೂ ಮಾನ್ಯ ಸದಸ್ಯರು ಸರ್ಕಾರವನ್ನು ಟೀಕೆ ಮಾಡುವುದು ಸರಿಯಾದುದಲ್ಲ. ಆ ಭೂಸುಧಾರಣೆ ಕಾನೂನು ಈವರೆಗೆ ಜಾರಿಗೆ ಬಂದಿದ್ದಲ್ಲಿ ಅನೇಕ ರೈತರು ಆ ಜಮೀನನ್ನು

ಬೇರೆಯವರಿಗೆ ಮಾರಾಟ ಮಾಡಿ ಯಥಾಪ್ರಕಾರ ಭೂಹೀನವರಾಗೇ ಇರುತ್ತಿದ್ದರು. ಅದಕ್ಕೆ ಅವಕಾಶವಿಲ್ಲದಂತಾಗಿದೆ. ಈ ದಿವಸ ಒಕ್ಕಲನ್ನು ಎಬ್ಬಿಸಲು ಯಾರಿಗೂ ಶಕ್ಯವಿಲ್ಲ. ಅಂತಹ ಒಂದು ಅನುಕೂಲ ಪರಿಸ್ಥಿತಿಯನ್ನು ಕಲ್ಪಿಸಿದ್ದೇವೆ. ಈ ಸಂದರ್ಭದಲ್ಲಿ ಒಂದು ಕಥೆ ಜ್ಞಾಪಕಕ್ಕೆ ಬರುತ್ತದೆ. "ಒಂದು ದಿವಸ ಒಬ್ಬ ಸೊಸೆ, ಯಾರೋ ಭಿಕ್ಷುಕನಿಗೆ ಪಾತ್ರೆಯಲ್ಲಿದ್ದ ಅಕ್ಕಿಯನ್ನು ಭಿಕ್ಷೆ ಹಾಕಿದಳಂತೆ. ಹಾಗೆ ಭಿಕ್ಷೆ ಹಾಕಿದ್ದನ್ನು ಕಂಡ ಅತ್ತೆ ಆ ಭಿಕ್ಷುಕನನ್ನು ಕರೆದು ಆ ಅಕ್ಕಿಯನ್ನೆಲ್ಲಾ ವಾಪಸ್ ತೆಗೆದುಕೊಂಡು ಆ ಭಿಕ್ಷುಕನನ್ನು ಬರಿಗೈಯಲ್ಲಿ ಕಳುಹಿಸಿದಳು. ಆತ ಸ್ವಲ್ಪ ದೂರ ಹೋದನಂತರ ಆತನನ್ನು ಕರೆದು ಮನೆಯಲ್ಲಿರತಕ್ಕ ಸೊಸೆಗೆ ಭಿಕ್ಷೆ ಹಾಕಲು ಅಧಿಕಾರವೆಲ್ಲಿದೆ? ಆ ಅಧಿಕಾರವೆಲ್ಲಾ ಅತ್ತೆಯಾದ ನನಗೊಬ್ಬಳಿಗೆ ಇರುವುದು ಎಂದು ಹೇಳಿ ಮತ್ತೆ ಆ ಅಕ್ಕಿಯನ್ನೆ ಆ ಭಿಕ್ಷುಕನಿಗೆ ಹಾಕಿ ಕಳುಹಿಸಿದಳಂತೆ." ಹೀಗೆ ಸರ್ಕಾರದವರು ಗೇಣಿದಾರರ ರಕ್ಷಣೆ ಮಾಡಿದರೆ ಅದು ರಕ್ಷಣೆ ಆಗುವುದಿಲ್ಲ. ಮಾನ್ಯ ಸದಸ್ಯರು ಹೇಳಿದರೆ ಅವರ ರಕ್ಷಣೆ ಆಗುತ್ತದೆಂಬುದು ಬಹಳ ವಿಚಿತ್ರವಾಗಿದೆ. ಈ ವಾದ ಅತ್ತೆ-ಸೊಸೆಯರ ಕಿತ್ತಾಟದಂತಾಗಿದೆ.

ರೈತರಿಗೆ ರಕ್ಷಣೆ ಕೊಡುವುದು ಬೇಡವೆಂದು ಮಸೂದೆಯನ್ನು ತಂದಿದ್ದರೆ ನೀವೆಲ್ಲಾ ರಕ್ಷಣೆ ಕೊಡಬೇಕೆಂದು ಹೇಳುತ್ತಿದ್ದೀರಿ. ಈ ತರಹ ಧೋರಣೆಯಿಂದ ಯಾರಿಗೂ ಧರ್ಮವಲ್ಲ. ರೈತರಿಗೂ ಧರ್ಮವಲ್ಲ, ನಮಗೂ ಧರ್ಮವಲ್ಲ, ಭೂ ಸುಧಾರಣೆಯನ್ನು ಜಾರಿಗೆ ತರದೆ ಇದ್ದ ಉದ್ದೇಶವನ್ನು ನಾನು ಹೇಳಿದ್ದೇನೆ. ಬೇಗ ಜಾರಿಗೆ ತರಬೇಕೆಂದು ಉದ್ದೇಶವಿದ್ದರೂ ಕೂಡ ರಾಜ್ಯಾಂಗಕ್ಕೆ ನಾನು ತಿದ್ದುಪಡಿ ಆಗಬೇಕಾಗಿರುವುದರಿಂದ ಸಾಧ್ಯವಿಲ್ಲವಾಗಿದೆ.

**ಶ್ರೀ ರೇವಣ್ಣ ಸಿದ್ದಯ್ಯ (ಸಿರಗುಪ್ಪ):** ಕಾನೂನು ಭಯದಿಂದ ನೂರಕ್ಕೆ ತೊಂಬತ್ತು ಜನ ಒಡೆಯರು ಸಾಗುವಳಿ ಚೀಟಿಯನ್ನು ಬರೆದುಕೊಡುತ್ತಿಲ್ಲವೆನ್ನುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಎಂ.ವಿ. ಕೃಷ್ಣಪ್ಪ:** ಮಾನ್ಯ ಸದಸ್ಯರು ಹೇಳುವುದು ನಿಜ. ಶ್ರೀಮಾನ್ ತಿಮ್ಮಪ್ಪಗೌಡರು ಮತ್ತು ಶ್ರೀಮಾನ್ ಮಂಜಯ್ಯಶೆಟ್ಟರು ಹೇಳಿದ್ದು ನಿಜ. ಶ್ರೀಮಾನ್ ಮಂಜಯ್ಯಶೆಟ್ಟರು ಹೇಳಿದ ಸ್ಥಳದಲ್ಲಿ Tenants dictate the land owners ಗೇಣಿದಾರರನ್ನು ಬಡಿಸುವುದು, ಗೇಣಿಯನ್ನು ಕೊಟ್ಟಿದ್ದರೂ ಕೊಟ್ಟಿಲ್ಲವೆಂದು ಹೇಳುವುದು ಇವೆಲ್ಲ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಡೆಯುವುದಿಲ್ಲ.

In South Kanara and North Kanara the Tenants are so enlightende and so much organised that they cannot be cheated. What Shri Manjaya Shetty said is therefore corrct. ಶ್ರೀ ಜಿ.ಎ. ತಿಮ್ಮಪ್ಪಗೌಡರು, ಹೇಳಿದ್ದು ನಿಜ. ಅವರು ಹೇಳಿದ ಕಡೆಯಲ್ಲಿ ಗೇಣಿದಾರರು ಅವಿದ್ಯಾವಂತರು ಕಾನೂನು ರಕ್ಷಣೆ ಕೊಟ್ಟರೂ ಮೋಸ ಮಾಡಬಹುದು. He is also correct because the tenants are illeterate and ignorant. Inspite of the protections we offer, they are evicted. ನಾನು

ದಕ್ಷಿಣ ಕನ್ನಡ ಜಿಲ್ಲೆಗೆ ಹೋಗಿದ್ದೆ. ಅಲ್ಲಿ ಗೇಣಿದಾರರೆಲ್ಲಾ ಸುಖವಾಗಿದ್ದಾರೆ. The operation of the Tenancy law is well known in South and North Kanara. Where the Tenants are highly educated, highly conscious and highly organised. Inspite of this, if it is said that they are evvicted, it cannot be believed. Land lords are in great trouble there.

But it cannot be applied all over the State. Wherever the Tenants are illeterate and ignorant inspite of all protection given by us, the poor Tenants cannot be helped because what as happened to them from the days of Rama and Bharatha? Till they are enlightened and educated we canot do much for them.

ರೈತನಿಗೆ ರಕ್ಷಣೆ ಕೊಡಬೇಕೆಂದು ತಂದಿರುವ ಈ ಮಸೂದೆಯನ್ನು ಮಾನ್ಯ ಸಭೆ ಒಪ್ಪಿಕೊಳ್ಳಬೇಕೆಂದು ಪ್ರಾರ್ಥನೆ ಮಾಡುತ್ತೇನೆ.

* * * * *

# ಮೈಸೂರ್ ಟೆನೆನ್ಸಿ ಲಾ (ವಿಧೇಯಕ) ಬಿಲ್, 1963

**ಮಾನ್ಯ ಕಂದಾಯ ಸಚಿವರಾದ ಶ್ರೀ ಎಂ.ವಿ. ಕೃಷ್ಣಪ್ಪನವರು ಭೂ ಸುಧಾರಣೆ ಶಾಸನವನ್ನು ಜಾರಿಗೆ ತರಲು ವಿಧಾನಪರಿಷತ್‌ನಲ್ಲಿ ಮಂಡಿಸಿದ ಬಿಲ್:**

**ಶ್ರೀ ಎಂ.ವಿ. ಕೃಷ್ಣಪ್ಪ (ಕಂದಾಯ ಶಾಖೆಯ ಮಂತ್ರಿಗಳು):** ಅಧ್ಯಕ್ಷರೇ, 1957ನೇ ಇಸವಿಯಲ್ಲಿ ಈ ಕನ್ನಡ ದೇಶ ಒಂದಾದ ಮೇಲೆ ನಾಲ್ಕೈದು ಸಂಸ್ಥಾನಗಳಿಂದ ಬಂದ ಭಾಗಗಳಲ್ಲಿ ಬೇರೆ ಬೇರೆ ರೀತಿಯಾದಂಥ ಗೇಣಿ ಶಾಸನಗಳಿದ್ದುವು. 1957ನೇ ಇಸವಿಯಲ್ಲಿ ಈ ಗೇಣಿ ಶಾಸನಗಳಿಗೆ ಸೂಕ್ತವಾದಂಥ ತಿದ್ದುಪಡಿಗಳನ್ನು ಪಾಸುಮಾಡಿ ಆ ತಿದ್ದುಪಡಿಯಾದ 4 ಕಾನೂನುಗಳೇ ಜಾರಿಯಲ್ಲಿದ್ದವು. 1957ನೇ ಬೊಂಬಾಯಿ ಟೆನೆನ್ಸಿ ಆಕ್ಟ್ ಮೊದಲನೆಯದು, ಎರಡನೆಯದು ಕೂರ್ಗ್ ಟೆನೆನ್ಸಿ ಆಕ್ಟ್, ಮೂರನೆಯದು ಹೈದರಾಬಾದ್ ಮತ್ತು ಮದ್ರಾಸ್ ಏರಿಯಾಸ್ ಟೆನೆನ್ಸಿ ಆಕ್ಟ್ ಮತ್ತು ನಾಲ್ಕನೆಯದು ಮೈಸೂರು ಟೆನೆನ್ಸಿ ಆಕ್ಟ್ ಎಂಬುದಾಗಿ ಈ ನಾಲ್ಕು ಗೇಣೀ ಶಾಸನಗಳು ಈ ಸಂಸ್ಥಾನದಲ್ಲಿ ಜಾರಿಯಲ್ಲಿದ್ದವು. ಆಗಾಗ್ಗೆ ಇವಕ್ಕೆ ಈ ಮಾನ್ಯ ಸಭೆ ಜೀವದಾನವನ್ನು ಕೊಡುತ್ತಾ ಬಂದಿದೆ. ಈ ನಾಲ್ಕು ಶಾಸನಗಳು ಕೂಡ ಈ ಭೂಸುಧಾರಣೆ ಮಸೂದೆ ಜಾರಿಗೆ ಬರಬೇಕಾಗಿದೆ. ಆದರೆ ಈ ಶಾಸನಗಳ ಅವಶ್ಯಕತೆ ಈಗ ಇಲ್ಲದಿರುವುದರಿಂದ ಅವು ರಿಪೀಲ್ ಆಗುತ್ತಿವೆ. ಭೂ ಸುಧಾರಣೆ ಶಾಸನ ಏಕೆ ಈಗ ಜಾರಿಗೆ ತರುವುದಿಕ್ಕಾಗುವುದಿಲ್ಲವೆಂಬ ವಿಷಯದಲ್ಲಿ ಈ ಮಾನ್ಯ ಸಭೆಯ ಗಮನಕ್ಕೆ ಎರಡು ಮುಖ್ಯಾಂಶಗಳನ್ನು ಹೇಳಬೇಕಾಗಿದೆ. ಅದನ್ನು ಮಾನ್ಯ ಸಭಾಪತಿಯವರು ಅವಶ್ಯಕವಾಗಿ ಒಪ್ಪಬೇಕೆಂದು ನಾನು ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಸರ್ಕಾರವೇನೋ ಬಹಳ ಕಾತುರದಿಂದ ಈ ಭೂ ಸುಧಾರಣೆ ಶಾಸನವನ್ನು ಜಾರಿಗೆ ತರಬೇಕೆಂದು ತೀರ್ಮಾನ ಮಾಡಿತು. ಆದರೆ ಅದು ಈಗ ಬದಲಾವಣೆಯಾಗಿದೆ. 1963ನೇ ಇಸವಿಯಲ್ಲಿ ಮುಂಗಾರು ಮಳೆ ಪ್ರಾರಂಭವಾಗುವುದರೊಳಗಾಗಿ ಇದನ್ನ ಜಾರಿಗೆ ತರುವುದಕ್ಕೆ ತಕ್ಕ ಕಾರ್ಯಕ್ರಮಗಳನ್ನು ತೆಗೆದುಕೊಳ್ಳಬೇಕೆಂದು ನಾವು ಕೇಂದ್ರ ಸರ್ಕಾರಕ್ಕೆ ಬರೆದಿದ್ದೆವು. ಕೇಂದ್ರ ಸರ್ಕಾರದಲ್ಲಿ ಈ ಇಲಾಖೆಗೆ ಸಂಬಂಧಪಟ್ಟ ಉಪಮಂತ್ರಿಗಳು ಮತ್ತು ಅಧಿಕಾರಿಗಳು ಮೈಸೂರು ದೇಶಕ್ಕೆ ಬಂದು ಸೆಪ್ಟೆಂಬರ್ ತಿಂಗಳಿನಲ್ಲಿ ಒಂದು ಸಭೆಯನ್ನು ಇಲ್ಲಿ ನಡೆಸಿ ಚರ್ಚೆ ಮಾಡಿದಾಗ ಪ್ಲಾನಿಂಗ್ ಕಮೀಷನ್ನಿನವರು ಒಂದು ಮಾತನ್ನು ಹೇಳಿದರು. ಈ ಬಗ್ಗೆ ಭಾರತದ ರಾಜ್ಯಾಂಗದಲ್ಲಿ ಬದಲಾವಣೆಯಾಗಬೇಕಾಗಿದೆ ಎಂದು. ಆ ವಿಷಯ ಸದಸ್ಯರನೇಕರಿಗೆ ಗೊತ್ತಿದೆ. ಕೇರಳ ಅಗ್ರೆರಿಯನ್ ಆಕ್ಟ್ ರಾಜ್ಯಾಂಗದ ವಿಧಿಗಳಿಗೆ ವಿರೋಧ ಎಂದು ಸುಪ್ರೀಂ ಕೋರ್ಟಿನಲ್ಲಿ ತೀರ್ಪು ಕೊಟ್ಟರು. ಪರಿಣಾಮವಾಗಿ ಹೈದರಾಬಾದ್ ಮತ್ತು ಮದ್ರಾಸ್ ಕರ್ನಾಟಕದ ಪ್ರದೇಶಗಳಲ್ಲಿರುವ ರೈತವಾರಿ ಮತ್ತು ಪಿಕ್ಕೆದಾರರಲ್ಲಿರತಕ್ಕ ಎರಡು ಗೇಣೀ ಶಾಸನಗಳ ಪದ್ಧತಿಗಳಿಗೂ ಕೂಡ ಇಂಡಿಯನ್ ರಾಜ್ಯಂಗದ ಆಕ್ಟ್ 31(A)ನೇ ಸೆಕ್ಷನ್ ಬದಲಾವಣೆ ಮಾಡದೇ ಇದ್ದರೆ, ಕೇರಳ ಅಗ್ರೇರಿಯನ್ ರಿಫಾರಮ್ಸ್ ಆಕ್ಟ್‌ಗೆ ಬಂದ ಗತಿಯೇ

ಬರುತ್ತದೆ, ಎಂಬುದಾಗಿ ಪ್ಲಾನಿಂಗ್ ಕಮಿಷನ್ ಅವರು ಹೇಳಿದರು. ನವೆಂಬರ್‌ನಲ್ಲಿ ಪಾರ್ಲಿಮೆಂಟಿನಲ್ಲಿ ಮಸೂದೆಯನ್ನು ತಂದು 31(ಎ) ವಿಧಿಯನ್ನು ತಿದ್ದುಪಡಿ ಮಾಡಿ ಅಲ್ಲಿನ ರೈತವಾರಿ ಮತ್ತು ಪಿಕ್ಕಿದಾರರ ಪದ್ಧತಿಯನ್ನು ಬದಲಾವಣೆ ಮಾಡುತ್ತೇವೆಂದು ಹೇಳಿದರು. ರಾಜ್ಯಾಂಗ ವಿಧಿ ಬದಲಾವಣೆಗೋಸ್ಕರ ನವೆಂಬರ್ ಮತ್ತು ಡಿಸೆಂಬರ್‌ನಲ್ಲಿ ಒಂದು ಕಾನೂನು ಪಾಸ್ ಮಾಡಬೇಕಾಗಿತ್ತು. ಆದರೆ ಚೈನಾ ಯುದ್ಧ ಬಂದುದರಿಂದ ಈ ಕಾರ್ಯಕ್ರಮ ಮುಂದೆ ಹೋಗಬೇಕಾಯಿತು. ರಾಜ್ಯಾಂಗದ 31(ಎ) ಕಾಲಂ ಇನ್ನೂ ತಿದ್ದುಪಡಿಯಾಗಿಲ್ಲ. ಹೀಗಾಗಿ ಮೈಸೂರಿನ ಭೂ ಸುಧಾರಣೆಯನ್ನು ಜಾರಿಗೆ ತರುವ ಸ್ಥಿತಿಯಲ್ಲಿಲ್ಲ. ರಾಜ್ಯಾಂಗದ 31(ಎ) ಕಲಂ ಬದಲಾವಣೆಯಾಗುವವರೆಗೂ ನಾವು ಇಲ್ಲಿ ಭೂ ಸುಧಾರಣೆಯನ್ನು ಜಾರಿಗೆ ತರುವ ರೀತಿಯಲ್ಲಿಲ್ಲ. ಆದಕಾರಣ ಈ ಮಸೂದೆಯನ್ನು ಈ ಮಾನ್ಯ ಸಭೇ ಒಪ್ಪಬೇಕಾಗಿದೆ. ಗೇಣೀ ಶಾಸನಗಳು ಈ ಸಂಸ್ಥಾನದಲ್ಲಿ ಯಾವ್ಯಾವುದು ಇವೆಯೋ ಅವುಗಳ ಜೀವದಾನ ಈ ತಿಂಗಳ 31ನೇ ತಾರೀಖಿಗೆ ಮುಗಿಯುವುದು. ಈಗ ಮುಂದಿನ ವರ್ಷ ಅಂದರೆ 1964ನೇ ಮಾರ್ಚ್ 31ನೇ ತಾರೀಖಿನವರೆಗೆ ಒಂದು ವರ್ಷಕಾಲ ಈ ಮಸೂದೆಗೆ ಜೀವದಾನ ಕೊಡಬೇಕಾಗಿದೆ. ಅದಕ್ಕೆ ಈ ಮಾನ್ಯ ಸಭೆ ಒಪ್ಪಿಗೆ ಕೊಡಬೇಕು. ವಿಧಾನ ಸಭೆಯ ಒಪ್ಪಿಗೆ ಈಗಾಗಲೇ ಇದಕ್ಕೆ ದೊರೆತಿದೆ. ಈ ಮಾನ್ಯ ಸಭೆಯವರೂ ಸಹ ಇದನ್ನು ಒಪ್ಪಬೇಕೆಂದು ಪ್ರಾರ್ಥನೆ ಮಾಡಿ ಈ ಗೇಣೀ ಶಾಸನವನ್ನು ಸಭೆಯ ಮುಂದಿಡುತ್ತೇನೆ.

* * * * *

# ದಿ ಮೈಸೂರ್ ಟೆನೆಂಟ್ಸ್ (ಟೆಂಪೊರರಿ ಪ್ರೊಟೆಕ್ಷನ್ ಫ್ರಮ್ ಎವಿಕ್ಷನ್)– ಬಿಲ್ *

**ಶ್ರೀ ಎಂ.ವಿ. ಕೃಷ್ಣಪ್ಪನವರು ಕಂದಾಯ ಮಂತ್ರಿಗಳಾಗಿ ಆರ್ಥಿಕ ಸಹಾಯಕ್ಕಾಗಿ ಹಿಂದಿನ ವರ್ಷ (1962) ಭೂಸುಧಾರಣೆ ಕಾಯ್ದೆಯಲ್ಲಿ ಬದಲಾವಣೆಗಳನ್ನು ಮಾಡಿದ್ದರು. ಆದರೆ ಈ ಸುಧಾರಣೆಯಿಂದ ಗೇಣಿದಾರರಿಗೆ ಸರಿಯಾದ ಅನುಕೂಲಗಳು ಲಭಿಸಿಲ್ಲ. ಈ ಕಾರಣದಿಂದ ಸಚಿವರು 'ಗೇಣಿದಾರರಿಗೆ ತಾತ್ಕಾಲಿಕ ರಕ್ಷಣೆ' ನೀಡುವ ಮಸೂದೆಯನ್ನು ರೂಪಿಸಿ ವಿಧಾನಪರಿಷತ್ತಿನಲ್ಲಿ ಮಂಡಿಸಿದ ಬಿಲ್ ಇದರ ಜೊತೆಯಲ್ಲಿ ಯುದ್ಧಕ್ಕೆ ಹೋದ ಸಿಪಾಯಿಗಳ ಭೂರಕ್ಷಣೆಗೆ ಸಂಬಂಧಿಸಿದ ವಿಧೇಯಕ ಬಿಲ್:**

**ಶ್ರೀ ಎಂ.ವಿ. ಕೃಷ್ಣಪ್ಪ (ಕಂದಾಯ ಸಚಿವರು):** ಮಾನ್ಯ ಸಭಾಪತಿಗಳೇ, ಈ ಮಸೂದೆಯೂ ಕೂಡ ಜೀವದಾನಕ್ಕೋಸ್ಕರ ಈ ಮಾನ್ಯ ಸಭೆಯ ಮುಂದೆ ಬಂದಿದೆ. ಹಿಂದಿನ ಟೆನೆನ್ಸಿ ತಿದ್ದುಪಡಿ ಕಾನೂನಿಗೆ ಇದಕ್ಕೂ ಏನು ವ್ಯತ್ಯಾಸವಿಲ್ಲ. ಆದರೆ ಇದು ಟೆಂಪೊರರಿ ಪ್ರೊಟೆಕ್ಷನ್ ಗೇಣಿದಾರರಿಗೆ ಕೊಡಬೇಕೆಂದು ಈ ವಿಷಯ ಮುಖ್ಯವಾಗಿದೆ. ಭೂಸುಧಾರಣೆ ಆಗುತ್ತದೆಂದು ಹಿಂದೆ ಹಿಡುವಳಿದಾರರಿಗೆ ಮೊದಲೇ ಗೊತ್ತಾಗಿದ್ದು, ಒಕ್ಕಲೆಬ್ಬಿಸುವ ಪ್ರಯತ್ನ ಇತ್ತೀಚೆಗೆ ಜಾಸ್ತಿಯಾದುದರಿಂದ ಆಗಿನ ಸರ್ಕಾರದವರು ಟೆಂಪೊರರಿ ಪ್ರೊಟೆಕ್ಷನ್ ತಂದರು. ಅದಕ್ಕೆ ವಿರೋಧಾಭಿಪ್ರಾಯವೂ ಕೂಡ ಹಿಂದೆ ಇತ್ತೆಂಬುದನ್ನು ಈ ಸಭೆಯ ಗಮನಕ್ಕೆ ತಂದಿದ್ದೇನೆ. ಗೇಣಿದಾರರಿಗೆ ಸರಿಯಾದ ಪ್ರೊಟೆಕ್ಷನ್ ಸಿಕ್ಕದೆ ಎಷ್ಟು ಎವಿಷನ್‌ಗಳು ಆಗಿವೆ ಎಂಬ ಬಗ್ಗೆ ಅಂಕಿ ಅಂಶಗಳೂ ಸಹಾ ಬಂದಿವೆ. ಅದಕ್ಕೋಸ್ಕರ ಈ ವಿಷಯದಲ್ಲಿ ತಕ್ಕ ಕಾರ್ಯಕ್ರಮಗಳನ್ನು ತೆಗೆದುಕೊಳ್ಳುವುದರಿಂದ ಬಹುಶಃ ಇಂತಹ ಎವಿಕ್ಷನ್ ಕೇಸುಗಳು ಕಡಿಮೆಯಾಗುವುದೆಂದು ಊಹಿಸಿ ಈ ಮಸೂದೆಯನ್ನು ತಂದಿದ್ದೇವೆ. ಇದಲ್ಲದೆ ಭೂಸುಧಾರಣೆ ಶಾಸನ ಜಾರಿಗೆ ಬರುವುದು ನಿಧಾನವಾಗಿರುವುದರಿಂದ ಹಿಂದಿನ ಮಸೂದೆಯ ರೀತಿ ಇದಕ್ಕೂ ಜೀವದಾನ ಕೊಡಬೇಕೆಂದು ಮಾನ್ಯ ಸದಸ್ಯರನ್ನು ಕೇಳಲು ಈ ಸಭೆಯ ಮುಂದೆ ಈ ವಿಧೇಯಕವನ್ನು ಇಡಲಾಗಿದೆ. ಇದರಲ್ಲಿ ಒಂದು ವಿಷಯ ಹೆಚ್ಚಿಗೆ ಅಡಕವಾಗಿದೆ.

ಹಿಂದಿನ 'ಗೇಣಿಶಾಸನ'ದಲ್ಲಿ ಯುದ್ಧಕ್ಕೆ ಹೋದ ಯೋಧರು ತಮ್ಮ ಭೂಮಿಯನ್ನು ಗೇಣಿದಾರರಿಗೆ ಕೊಟ್ಟಿದ್ದರೂ ಯುದ್ಧದಿಂದ ವಾಪಸ್ಸು ಬಂದ ಮೇಲೆ ಅದನ್ನು ಪುನಃ ತೆಗೆದುಕೊಳ್ಳುವ ಹಕ್ಕು ಇತ್ತು. ದೇಶದ ರಕ್ಷಣೆಗಾಗಿ ಯುದ್ಧ ಭೂಮಿಯಲ್ಲಿ ಇರಬೇಕಾದರೆ ಪುನಃ ಆತ ವಾಪಸ್ಸು ಬಂದು ತನ್ನ ಭೂಮಿಯನ್ನು ಮತ್ತೆ ಗೇಣಿದಾರರಿಂದ ವಾಪಸ್ಸು ಪಡೆಯುವ ಹಕ್ಕು ಇತ್ತು. ಟೆಂಪೊರರಿ

---

* ವಿಧಾನ ಪರಿಷತ್ 1963

ಪ್ರೊಟೆಕ್ಷನ್ನಿನಲ್ಲಿ ಅದನ್ನು ಬಿಟ್ಟಿದೆ. ಈಗ ಚೈನಾದವರ ಧಾಳಿ ಮುಗಿದಿದ್ದರಿಂದ ಅನೇಕ ಸಿಪಾಯಿಗಳು ನಮಗೆ ಕಾಗದ ಬರೆದಿದ್ದಾರೆ. ದೇಶದ ರಕ್ಷಣೆಗೋಸ್ಕರ ಹೋಗಿರುತ್ತೇವೆ, ನಮ್ಮ ಭೂಮಿಯನ್ನು ಗೇಣಿದಾರರು ವ್ಯವಸಾಯ ಮಾಡುತ್ತಿದ್ದಾರೆ. ನಾವು ವಾಪಸ್ಸು ಬಂದ ಮೇಲೆ ನಮ್ಮ ಭೂಮಿಯನ್ನು ನಮಗೆ ವಾಪಸ್ಸು ಕೊಡಬೇಕೆಂಬುದಾಗಿ ಬರೆದಿದ್ದಾರೆ. ಅವರು ವಾಪಸ್ಸು ಬಂದ ನಂತರ ಅವರ ಭೂಮಿಯನ್ನು ಅವರು ಮತ್ತೆ ತೆಗೆದುಕೊಳ್ಳುವ ರಕ್ಷಣೆ ಕೊಡದಿದ್ದರೆ ಅದು ಧರ್ಮವಲ್ಲವೆಂಬ ದೃಷ್ಟಿಯಿಂದ ದೇಶದ ರಕ್ಷಣೆಗೋಸ್ಕರ ಹೋಗುವ ಸಿಪಾಯಿಗಳಿಗೆ ಯುದ್ಧ ಭೂಮಿಯಿಂದ ವಾಪಸ್ಸು ಬಂದ ನಂತರ ಮತ್ತೆ ಅವರು ಭೂಮಿಯನ್ನು ಹಿಂದಕ್ಕೆ ತೆಗೆದುಕೊಳ್ಳುವ ದೃಷ್ಟಿಯಿಂದ ಈ ಮಸೂದೆಯನ್ನು ತಂದಿದ್ದೇವೆ. ಆದ್ದರಿಂದ ಈ ಮಸೂದೆಯನ್ನು ಸಹಾ ಮಾನ್ಯ ಸದಸ್ಯರು ಒಪ್ಪಿಕೊಳ್ಳಬೇಕು.

* * * * *

# ಭೂ ಸುಧಾರಣಾ ಶಾಸನ (ವಿಧೇಯಕ) ಬಿಲ್ *

**ಎಂ.ವಿ. ಕೃಷ್ಣಪ್ಪನವರು 'ಗೇಣಿ'ಗೆ ಸಂಬಂಧಿಸಿದಂತೆ 'ಭೂ ಸುಧಾರಣಾ ಶಾಸನ'ವನ್ನು ತರಬೇಕೆಂದು ಪ್ರಯತ್ನಿಸಿದರು. ಅದಕ್ಕೆ ಸಂಬಂಧಿಸಿದಂತೆ ವಿಧಾನ ಸಭೆಯಲ್ಲಿ ಸಚಿವರ ಚರ್ಚೆ.**

**ಶ್ರೀ ಎಂ.ವಿ. ಕೃಷ್ಣಪ್ಪ**– ಮಾನ್ಯ ಅಧ್ಯಕ್ಷರೇ, ಶ್ರೀಮಾನ್ ಶಿವಪ್ಪನವರು ಈ ಮಸೂದೆಯನ್ನು ವಿರೋಧಿಸುತ್ತ ಈ ಅಧಿವೇಶನದ ಕೊನೆಯೊಳಗಾಗಿ ಒಂದು emergency legislation ಆದರೂ ತಂದು ಸರ್ಕಾರ ಭೂ ಸುಧಾರಣೆ ಮಸೂದೆಯನ್ನು ಜಾರಿಗೆ ತರಬೇಕು ಎಂದು ಹೇಳಿದ್ದಾರೆ. ಭೂ ಸುಧಾರಣೆಯನ್ನು ಸಾಧ್ಯವಾದಷ್ಟು ಬೇಗ ಜಾರಿಗೆ ತರಬೇಕು ಎನ್ನುವುದೇ ಪೂರ್ವದಿಂದಲೂ ಸರ್ಕಾರದ ಒಂದು ಆಸೆ ಎಂದು ನಾನು ಪದೇಪದೇ ಹೇಳಿದ್ದೇನೆ. ಆದರೆ ಈ ಕಾರ್ಯವನ್ನು ಕಾನೂನು ಕಟ್ಟಳೆಗಳಿಗೊಳಪಟ್ಟು ಮಾಡಬೇಕಾಗಿದೆ. ಸರ್ಕಾರ ಸ್ವಲ್ಪ ತಪ್ಪುದಾರಿಯನ್ನು ತುಳಿದಿದ್ದೇ ಆದರೆ ಹೈಕೋರ್ಟ್ ಮತ್ತು ಸುಪ್ರೀಂಕೋರ್ಟ್ ಇವೆ. ತಮಗೆಲ್ಲರಿಗೂ ಕೂಡ ಗೊತ್ತಿದೆ. ಈಚಿನ ದಿನಗಳಲ್ಲಿ ಎಷ್ಟೋಂದು ಸರ್ಕಾರದ ನಡವಳಿಕೆಗಳು ಸುಪ್ರೀಂಕೋರ್ಟ್ ಮತ್ತು ಹೈಕೋರ್ಟ್ ಇವುಗಳು ಮುಂದೆ ಬಂದು ಅದರ ಬಗ್ಗೆ ಜಡ್ಜ್‌ಮೆಂಟನ್ನು ಕೊಡುತ್ತಿದ್ದಾರೆ. ಕೇರಳ ಭೂಶಾಸನದ ಬಗ್ಗೆ ಸುಪ್ರೀಂಕೋರ್ಟ್ ಒಂದು ತೀರ್ಮಾನ ಕೊಟ್ಟ ಮೇಲೆ ನಮ್ಮ ಶಾಸನದ ಗತಿಯೂ ಅದೇ ಆಗುತ್ತದೆ. ರಾಜ್ಯಾಂಗದ 31(A) ಆರ್ಟಿಕಲ್ ತಿದ್ದುಪಡಿಯಾಗುವವರೆಗೂ ಇದನ್ನು ಜಾರಿಗೆ ತರುವುದು ಅಷ್ಟು ಬುದ್ಧಿವಂತಿಕೆಯಲ್ಲ. ಕೇಂದ್ರ ಸರ್ಕಾರದ ಮಂತ್ರಿಗಳು ಇಲ್ಲಿ ಬಂದಿದ್ದಾಗ ಅವರೂ ಸಹ ರಾಜ್ಯಾಂಗದ ತಿದ್ದುಪಡಿ ಮಾಡಬೇಕೆಂಬುದನ್ನು ಒಪ್ಪಿಕೊಂಡರು. ಡಿಸೆಂಬರ್ ತಿಂಗಳಿನಲ್ಲಿ ಖಾತ್ರಿಯಾಗಿ ಮಾಡುತ್ತೇವೆಂದು ಹೇಳಿದ್ದರು. ಅವರು ಡಿಸೆಂಬರ್ ತಿಂಗಳಿನಲ್ಲಿ ತಿದ್ದಪಡಿಯನ್ನು ಮಾಡಿದ್ದರೆ, ನಾವು ಜನವರಿ, ಫೆಬ್ರವರಿ ತಿಂಗಳಿನಲ್ಲಿ ಎಂದರೆ ಮುಂಗಾರು ಮಳೆ ಪ್ರಾರಂಭವಾಗುವುದಕ್ಕೆ ಮೊದಲೇ ಭೂ ಸುಧಾರಣೆಯನ್ನು ಜಾರಿಗೆ ತರಬಹುದಾಗಿತ್ತು.

ಯಾವ ರೈತರಿಗೋಸ್ಕರ ಶ್ರೀಮಾನ್ ಶಿವಪ್ಪನವರು, ಗೋಪಾಲಗೌಡರು ಮತ್ತು ಮುಕ್ಕಣ್ಣಪ್ಪನವರೂ, ಮಿತ್ರರೂ ಹೇಳುತ್ತಿದ್ದಾರೆಯೋ ಅದೇ ರೈತರಲ್ಲಿ ಒಂದು ಆಶಾಭಾವನೆ ಮೂಡಿ ಸಂತೋಷದಿಂದ ಭೂಮಿ ತನ್ನದು ಎನ್ನುವ ಉತ್ಸಾಹವುಂಟಾಗಲಿ ಎನ್ನುವ ಆಸೆ ನಮಗೂ ಇದೆ. ನಾನು ಹೇಳಿದ ಹಾಗೆ ಡಿಸೆಂಬರ್‌ನಲ್ಲಿ ರಾಜ್ಯಾಂಗದ ತಿದ್ದುಪಡಿಯಾಗಬೇಕಾಗಿತ್ತು. ಆದರೆ ಡಿಸೆಂಬರ್ ಅಧಿವೇಶನದಲ್ಲಿ ಕೇಂದ್ರ ಸರ್ಕಾರ ಚೀನಾ ಯುದ್ಧದ ವಿಷಯದ ಚರ್ಚೆಯಲ್ಲಿ ಕಾಲ ಕಳೆಯಬೇಕಾಗಿತ್ತು. ಆದ್ದರಿಂದ ರಾಜ್ಯಾಂಗದ ತಿದ್ದುಪಡಿಯ ಪ್ರಶ್ನೆ ಆಗಬರಲಿಲ್ಲ. ಸಾಧ್ಯವಾದಷ್ಟು ಬೇಗ ಅವರು ರಾಜ್ಯಾಂಗಕ್ಕೆ ತಿದ್ದುಪಡಿಯನ್ನು ತಂದು 31 (A) ಕಲಮನ್ನು ಬದಲಾವಣೆ ಮಾಡಿದರೆ ತಕ್ಷಣ ನಾವು ಮೈಸೂರು ದೇಶದಲ್ಲಿ ಭೂ ಸುಧಾರಣೆಯನ್ನು ಜಾರಿಗೆ ತರಬೇಕು ಎನ್ನುವ ಆಸೆಯಿಂದ ಇದ್ದೇವೆ.

---

* ವಿಧಾನ ಸಭೆ

ಶ್ರೀಮಾನ್ ಮುಕ್ಕಣ್ಣಪ್ಪನವರಿಗೆ ಮತ್ತು ಶ್ರೀಮಾನ್ ಗೋಪಾಲಗೌಡರಿಗೆ ನನ್ನ ಉತ್ತರವಿಷ್ಟೆ; ತಮಗಿಂತಲೂ ನನಗೆ ಇದರಲ್ಲಿ ಬಹಳ ಆತುರತೆ ಇದೆ. ನಾನು ವೈಯಕ್ತಿವಾಗಿ ಹೇಳುವುದಾದರೆ, ಕೋಲಾರ ಜಿಲ್ಲೆಯಲ್ಲಿ ರೈತರ ಚಳುವಳಿಯನ್ನು ಮಾಡಿದವರು, ಶ್ರೀಮಾನ್ ವೆಂಕಟಗಿರಿಯಪ್ಪನವರಿಗೂ ಈ ವಿಷಯ ಗೊತ್ತು. ಮೈಸೂರು ಸಂಸ್ಥಾನದಲ್ಲಿ ಜೋಡಿ, ಇನಾಂತಿ, ಖಾಯಂಗುತ್ತ ಇರುವುದು ಬಹಳ ಮಟ್ಟಿಗೆ ಕೋಲಾರ ಜಿಲ್ಲೆಯಲ್ಲಿ ಅದರಲ್ಲಿಯೂ ನನ್ನ ತಾಲ್ಲೂಕಿನಲ್ಲಿ ಎಂದರೆ ಮುಳಬಾಗಲು ತಾಲ್ಲೂಕಿನಲ್ಲಿರುವ 300 ಗ್ರಾಮಗಳಲ್ಲಿ 150–160 ಗ್ರಾಮಗಳು ಇನಾಂ, ಜೋಡಿ ಮೊದಲಾದವು ಆಗಿದೆ. ಅಲ್ಲಿ ಸರ್ವೆ ಸೆಟಲ್‌ಮೆಂಟ್ ಆಗದೆ ಅನೇಕ ರೈತರಿಗೆ ರಕ್ಷಣೆ ಇರಲಿಲ್ಲ. ವಿದ್ಯಾರ್ಥಿಗಳಾಗಿರುವಾಗಲೇ ಶ್ರೀಮಾನ್ ವೆಂಕಟಗಿರಿಯಪ್ಪನವರು ನಾನು ಎಲ್ಲ ಸೇರಿ ರೈತ ಸಂಘಗಳನ್ನು ನಿರೂಪಣೆ ಮಾಡಿಕೊಂಡು ರೈತರಿಗೆ ರಕ್ಷಣೆ ಸಿಕ್ಕಬೇಕು ಭೂ ಸುಧಾರಣೆ ಜಾರಿಗೆ ಬಂದು ರೈತರು ಜಮೀನಿನ ಒಡೆಯರಾಗಬೇಕೆಂದು ಚಳುವಳಿಯನ್ನು ಪ್ರಾರಂಭ ಮಾಡಿದವರು ನಾವು. ಆಮೇಲೆ ಕಾಗೋಡು ಸತ್ಯಾಗ್ರಹವನ್ನು ಶ್ರೀಮಾನ್ ಗೋಪಾಲಗೌಡರು ಪ್ರಾರಂಭ ಮಾಡಿದರು. ರೈತ ಚಳುವಳಿಯನ್ನು ಪ್ರಾರಂಭ ಮಾಡಿದ ಕೀರ್ತಿ ಕೋಲಾರ ಜಿಲ್ಲೆಯ ಯುವಕರಿಗೆ ಸೇರಬೇಕು. ಆ ಯುವಕರಲ್ಲಿ ಒಬ್ಬನಾದ ನಾನು ಇಲ್ಲಿ ರೆವೆನ್ಯೂ ಮಂತ್ರಿಯಾಗಿ ಬಂದು ಯಾವ ಕಾರ್ಯವಾಗಬೇಕೆಂದು ಪ್ರಯತ್ನಪಟ್ಟೆವೋ ಅದನ್ನು ತಡ ಮಾಡುತ್ತಿದ್ದೇನೆಂದು ಹೇಳುವುದರಲ್ಲಿ ಯಾವ ಅರ್ಥವೂ ಇಲ್ಲ. ಏನೋ ಬಯ್ಯಬೇಕು ಎಂದು ಬಯ್ಯುವವರಿಗೆ ನಾನು ಹೇಳುವುದಕ್ಕಾಗುವುದಿಲ್ಲ. "ಎಲ್ಲಿಲಯಾದರೂ ಇರು, ಹೇಗಾದರೂ ಇರು, ಆದರೆ ಕನ್ನಡಿಗನಾಗಿರು" ಎಂದು ಒಬ್ಬ ಕವಿ ಹೇಳಿರುವಂತೆ ಶ್ರೀಮಾನ್ ಮುಕ್ಕಣ್ಣಪ್ಪನವರು ಏನಾದರೂ ಬಯ್ಯಲಿ, ಈ ಮಸೂದೆಯನ್ನು ಒಪ್ಪಿಕೊಂಡರೆ ಸಾಕು.

ಭೂಮಿಯನ್ನು ಉಳುವವರಿಗೆ ರಕ್ಷಣೆಬೇಕು ಇದು ರಕ್ಷಣೆಯ ಮಸೂದೆ. ಸಾಧ್ಯವಾದಷ್ಟು ಬೇಗ ಭೂಸುಧಾರಣೆಯನ್ನು ತರಬೇಕೆನ್ನುವುದೇ ನಮ್ಮ ಇಷ್ಟ. ಆದರೆ ನಾನು ಹೇಳಿದ ಹಾಗೆ ರಾಜ್ಯಾಂಗ ಬದಲಾವಣೆಯಾದ ಹೊರತು ನಾವು ಏನೂ ಮಾಡುವುದಕ್ಕಾಗುವುದಿಲ್ಲ. ರಾಜ್ಯಾಂಗಕ್ಕೆ ಸಾಧ್ಯವಾದಷ್ಟು ಬೇಗ ತಿದ್ದುಪಡಿ ತರಬೇಕು, ಶ್ರೀಮಾನ್ ಕೃಷ್ಣಪ್ಪನವರಿಗೆ ಕೇಂದ್ರದಲ್ಲಿ ಪ್ರಭಾವವಿದೆ ಎಂದು ಹೇಳಿದರು. ನನ್ನ ಪ್ರಭಾವವನ್ನೂ ಪೂರಾ ಉಪಯೋಗಿಸುತ್ತಿದ್ದೇನೆ. ಆದರೆ ಚೀನಾ ದೇಶದವರ ಮುಂದೆ ನಮ್ಮ ಪ್ರಭಾವ ನಡೆಯುವುದಿಲ್ಲ. ಆದ್ದರಿಂದ ಸ್ವಲ್ಪ ತಡವಾಗಿದೆ. ಸಾಧ್ಯವಾದಷ್ಟು ಬೇಗ ರಾಜ್ಯಾಂಗಕ್ಕೆ ತಿದ್ದುಪಡಿ ಮಾಡಬೇಕೆಂದು ನಾವು ಹೇಳುತ್ತಿದ್ದೇವೆ. ಬೇಗ ಮಾಡಬಹುದು ಎನ್ನುವ ನಂಬಿಕೆ ಇದೆ.

ಶ್ರೀಮಾನ್ ಮುಕ್ಕಣ್ಣಪ್ಪನವರು ಮಾತಾನಾಡುತ್ತ ಒಂದು ವಿಷಯವನ್ನು ಹೇಳಿದರು. ಅವರ ತಾಲ್ಲೂಕಿನಲ್ಲಿ 300 ಜನ ರೈತರಿಗೂ ಶ್ರೀಮಾನ್ ರಾಚಯ್ಯನವರು eviction order ಕೊಟ್ಟಿದ್ದುದಕ್ಕೆ ನಾನು Stay aroder ಕೊಟ್ಟಿದ್ದೇನೆಂದು ಹೇಳಿದರು. ರೈತರನ್ನು evict ಮಾಡಬೇಡಿ, ಅವರನ್ನು ಒಕ್ಕಲೆಬ್ಬಿಸಬೇಡಿ ಎಂದ ನಾನು ಸ್ಟೇ ಆರ್ಡರ್ ಕೊಟ್ಟಿದ್ದೇನೆ. ಅವರೆಲ್ಲ ಬಣಜಾರರು, ಲಂಬಾಣಿಗಳು,

ಎಲ್ಲಿಂದಲೋ ಬಂದಿದ್ದಾರೆ, ಅವರಿಗೆ ಏನು ಕರುಣೆ ತೋರಿಸುತ್ತೀರಿ ಎಂದು ಹೇಳಿದರು. ಇವರ ಮಾತೃಭಾಷೆ ಹಿಂದಿ ಆದರೂ ಇವರು ಎಲ್ಲಿ ಬಂದು ನೆಲಸುತ್ತಾರೆಯೋ ಆ ಭಾಷೆಯನ್ನೇ ಒಪ್ಪಿಕೊಳ್ಳುತ್ತಾರೆ. 300 ಸಂಸಾರಗಳನ್ನೂ ಒಕ್ಕಲೆಬ್ಬಿಸುವುದಕ್ಕೆ ಒಂದು ಸ್ಟೇ ಆರ್ಡರ್ ಕೊಟ್ಟಿದ್ದರೆ ಅದರಿಂದ ನಾನು ಉಪಕಾರ ಮಾಡಿದ್ದೇನೆಯೇ ವಿನಾ ಅವರಿಗೆ ತೊಂದರೆಯಾಗಿಲ್ಲ. ಅವರು ಎಲ್ಲಿಂದಲೋ ಬಂದಿದ್ದರೂ ಸಹ ನಮ್ಮಲ್ಲಿ ಭೂಮಿಯಲ್ಲಿ ಉತ್ತು ಬಿತ್ತು ಬೆಳೆಯುತ್ತಿದ್ದಾರೆ. ಅಂಥವರನ್ನು ಭೂಮಿ ಬಿಟ್ಟು ಹೋಗಿ ಎನ್ನವುದು ಧರ್ಮವಲ್ಲ.

ಈಗ ಸಭೆಯ ಮುಂದಿರುವ ಮಸೂದೆಯನ್ನು ಒಪ್ಪಿಕೊಳ್ಳಬೇಕೆಂದು ಹೇಳುತ್ತೇನೆ.

**ಶ್ರೀ ಸಿ.ಜೆ. ಮುಕ್ಕಣ್ಣಪ್ಪ:** ನಾನು ಹೇಳಿದ್ದು ಅರಣ್ಯ ಖಾತೆಗೆ ಸೇರಿದಂತ ಭೂಮಿಯನ್ನು ಅವರು ಕಾನೂನು ಬಾಹಿರವಾಗಿ ಸಾಗುವಳಿ ಮಾಡಿದ್ದಾರೆಂದು. ಅವರನ್ನು ಬಿಡಿಸಲು ಮಾಡಿದ್ದ ಆರ್ಡರಿಗೆ stay ಕೊಟ್ಟಿದ್ದಾರೆ. ಮಾನ್ಯ ಮಂತ್ರಿಗಳು ಹೇಳುವ ಪ್ರಕಾರ ಹೋದರೆ ಈ ರಾಜ್ಯದಲ್ಲಿ ಒಂದಗುಲ ಭೂಮಿಯೂ ಉಳಿಯುವುದಿಲ್ಲ. ಮಂತ್ರಿಗಳು ನಾನು ಹೇಳಿದ್ದನ್ನು misquote ಮಾಡಿದರು. ಅಲ್ಲಿ 40 ಜನ ಬಂದಿದ್ದಾರೆ.

**ಶ್ರೀ ಎಂ.ವಿ. ಕೃಷ್ಣಪ್ಪ:** ಅವರು ಬಂಜರು ಭೂಮಿಯನ್ನು ಉತ್ತುಕೊಂಡಿದ್ದಾರೆ. ಭೂಮಿ ಇಲ್ಲದೆ ಇದ್ದುದರಿಂದ ಅದು ಪುಂಡರುಗಿದ್ದರು. ಭೂಮಿಯಲ್ಲಿ ಗೇಯುತ್ತಿರುವುದರಿಂದ ಅದರ ಪುಂಡತ್ವ ಹೋಗಿ ಅವರಿಗೆ ಸಾಧುತ್ವ ಬರುತ್ತಿದೆ. ಜಮೀನಿಲ್ಲದವರು ಕೆಲಸವಿಲ್ಲದೆ ಪುಂಡನಾಗಿ ಕಳ್ಳತನ ಮುಂತಾದುದನ್ನು ಮಾಡಬೇಕಾಗುತ್ತದೆ. ಅವರಿಗೆ ಜಮೀನು ಕೊಟ್ಟಿದ್ದರಿಂದ ಅವನಲ್ಲಿ ಪುಂಡತ್ವ ಹೋಗಿ ಅವನು ದೇಶಕ್ಕೋಸ್ಕರ ದುಡಿಯುತ್ತಿದ್ದಾನೆ.

* * * * *

## ನೆಹರು ಅವರಿಗೆ ಅಂತಿಮ ನಮನ *

### (ಮೇ 27, 1964ರಂದು ದೈವಾದೀನರಾದರು)

**Sri M.V. Krishnappa (Minister for Revenue):** "That the Mysore Legislative Council records its feeling of profound sorrow at the passing away of Sri Jawaharlal Nehru, Prime Minister of India, who dedicated his life to emancipate the enslaved peoples throughout the world and strove to free the human race from the horrors of Nuclear war. He was the beloved leader of the people of India whom he led in their battle for freedom from foreign domination and whose voice was heard with respect by the mightest nations of the world. His services to the Indian people have parallel. His strove ceaselessly to rescue the millions from the depths of poverty and Ignorance. He was a great parliamentatian who by his own conduct and precept sought to instil in everyone a deep respect for Parliamentary Institutions and authorities and the rule of conduct and procudere.

His memory will be cherished as that of a great emanicipator who employed moral force in solving the problems of the civilised world. This council expresses its firm resolve to strive for the ideals of progress and national unity, solidarity and prosperity to which he dedicated himself throughout his life.".

* * * * *

---

*ವಿಧಾನ ಪರಿಷತ್

# ರಾಜ್ಯದಲ್ಲಿ ಡೈರಿಗಳ ಸ್ಥಾಪನೆ

**ಎಂ.ವಿ. ಕೃಷ್ಣಪ್ಪನವರು ವಿಧಾನಪರಿಷತ್‌ನಲ್ಲಿ–1964 ರಾಜ್ಯದಲ್ಲಿ ಡೈರಿಗಳನ್ನು ಸ್ಥಾಪನೆ ಮಾಡಲು ಪಶುಸಂಗೋಪನ ಸಚಿವರಾಗಿ ತುಂಬಾ ಶ್ರಮವಹಿಸಿದರು. ಇದಕ್ಕೆ ಸಂಬಂಧಿಸಿದಂತೆ ಮೇಲ್ಮನೆಯಲ್ಲಿ ಶ್ರೀಯುತರ ಚರ್ಚೆ.**

**ಶ್ರೀ ಹಾರನಹಳ್ಳಿ ರಾಮಸ್ವಾಮಿ** – ಜಿಲ್ಲಾ ಕೇಂದ್ರಗಳಲ್ಲಿ ಈಗಿರತಕ್ಕ ಹಾಲಿನ ಕೊರತೆಯನ್ನು ನೀಗಿಸುವುದಕ್ಕೆ ಸರ್ಕಾರ ಇದುವರೆಗೆ ಏನೇನು ಕಾರ್ಯಕ್ರಮಗಳನ್ನು ತೆಗೆದುಕೊಂಡಿದೆ?

**ಶ್ರೀ ಎಂ.ವಿ. ಕೃಷ್ಣಪ್ಪ:** ಈಗ ಸರ್ಕಾರದವರು ಸಂಸ್ಥಾನದಲ್ಲಿ ಸುಮಾರು 1 ಲಕ್ಷ ಜನಸಂಖ್ಯೆ ಮೇಲೆ ಇರುವ ಟೌನುಗಳಲ್ಲಿ ಮಾತ್ರ ಕ್ಷೀರ ಕೇಂದ್ರಗಳನ್ನು ಪ್ರಾರಂಭ ಮಾಡುವುದಕ್ಕೆ ತೀರ್ಮಾನ ಮಾಡಿ ಆ ಬಗ್ಗೆ ಈಗಾಗಲೇ ಜಿ.ಒ. ಆಗಿದೆ. ಡಿಫರೆಂಟ್ ಸ್ಟೇಜಸ್ಸಿನಲ್ಲಿ ಕೆಲಸ ನಡೆಯುತ್ತಿದೆ. ಮುಖ್ಯವಾಗಿ ಬೆಂಗಳೂರು ಸ್ಕೀಮು ಬಹಳ ದೊಡ್ಡ ಸ್ಕೀಮು ಆ ಸ್ಕೀಮು ಒಂದೂವರೆ ಕೋಟಿ ರೂಪಾಯಿಗಳ ಅಂದಾಜಾಗಿ ಸಿದ್ಧವಾಗಿದೆ. ಇನ್ನೆರಡು ತಿಂಗಳೊಳಗೆ ಅಂದರೆ ಆಗಸ್ಟುನೊಳಗೆ ಈ ಸ್ಕೀಮನ್ನು ಪ್ರಾರಂಭ ಮಾಡಬೇಕೆಂದಿದ್ದೇವೆ. ಪ್ರತಿಯೊಂದು ಜಿಲ್ಲೆಯಲ್ಲೂ ಹಾಲಿನ ಕೇಂದ್ರವನ್ನು ಪ್ರಾರಂಭ ಮಾಡಬೇಕೆಂಬುದೇ ಸರ್ಕಾರದ ಇಚ್ಛೆ ಮತ್ತು ಅದು ಸರ್ಕಾರದ ಕರ್ತವ್ಯವಾಗಿದೆ. ಆದರೆ 8 ಸ್ಕೀಮುಗಳು ಎಲ್ಲಾ ಜಿಲ್ಲೆಗಳಿಗೂ ಕವರ್ ಆಗುವುದಿಲ್ಲ. ಈಗ 8 ಜಿಲ್ಲೆಗಳಿಗೆ ಕೊಟ್ಟಿರತಕ್ಕದ್ದು ಆಗಿದೆ. ಇದರಿಂದ ಇನ್ನು 12 ಜಿಲ್ಲೆಗಳು ಹಾಗೆಯೇ ಉಳಿಯುತ್ತವೆ. ಉಳಿದ ಜಿಲ್ಲೆಗಳಲ್ಲಿ ಹಾಲಿನ ಕೇಂದ್ರಗಳನ್ನು ಪ್ರಾರಂಭಿಸಲು ಬೇಕಾಗತಕ್ಕ ಹಣವನ್ನು ರಿಜರ್ವ್ ಬ್ಯಾಂಕಿನವರನ್ನು ಸರ್ಕಾರಕ್ಕೆ ಸಾಲ ಕೊಡುವ ಹಾಗೆ ಕ್ಯಾಟಲ್ ಡೆವಲಪ್‌ಮೆಂಟ್ ಲೋನ್ ರೀತಿ ಕೊಡಬೇಕೆಂದು ಪ್ರಾರ್ಥನೆ ಮಾಡಿಕೊಂಡ ಮೇಲೆ ಅವರು ಒಪ್ಪಿಕೊಂಡಿದ್ದಾರೆ. ಯಾರಾದರೂ ಮುಂದೆ ಬಂದರೆ ಜಿಲ್ಲಾ ಲೆವಲ್ಲಿನಲ್ಲಿ ಹಾಲಿನ ಕೇಂದ್ರಗಳನ್ನು ತೆರೆಯುವುದಕ್ಕಾಗಿ ಜಿಲ್ಲಾ ಬ್ಯಾಂಕುಗಳು ಹಣವನ್ನು ಕೊಡುತ್ತವೆ.

**ಶ್ರೀ ಹಾರ್ನಳ್ಳಿ ರಾಮಸ್ವಾಮಿ:** ಈ ಸ್ಕೀಮನ್ನು ನಾಲ್ಕನೆಯ ಯೋಜನೆಯಲ್ಲಿ ಸೇರಿಸುವುದಕ್ಕೆ ಯೋಜನೆ ಮಾಡುತ್ತೀರಾ?

**ಶ್ರೀ ಎಂ.ವಿ. ಕೃಷ್ಣಪ್ಪ:** ಆ ರೀತಿ ಮಾಡಬೇಕೆಂದಿದ್ದೇನೆ. ನಾಲ್ಕನೇ ಪಂಚವಾರ್ಷಿಕ ಯೋಜನೆ ಮುಗಿಯುವ ಹೊತ್ತಿಗೆ ಪ್ರತಿಯೊಂದು ಜಿಲ್ಲಾ ಹೆಡ್‌ಕ್ವಾರ್ಟರಿನಲ್ಲೂ ಒಂದೊಂದು ಹಾಲಿನ ಕೇಂದ್ರವನ್ನು ತೆರೆಯಬೇಕೆಂಬ ಯೋಚನೆ ಇದೆ. ಅದನ್ನು ಮಾಡಿಯೇ ಮಾಡುತ್ತೇವೆ. ಆದರೆ ಮೂರನೆಯ ಪಂಚವಾರ್ಷಿಕ ಯೋಜನೆಯಲ್ಲಿ ಇದನ್ನು ಸೇರಿಸಲಿಲ್ಲ.

**ಶ್ರೀ ಹಾರ್ನಹಳ್ಳಿ ರಾಮಸ್ವಾಮಿ:** ಒಂದು ವೇಳೆ ಸಹಕಾರ ಸಂಘಗಳನ್ನು ಮಾಡಿಕೊಂಡರೆ ಯಾವ್ಯಾವ ವಿಭಾಗಗಳಿಗೆ ಸರ್ಕಾರದಿಂದ ಅಥವಾ ಜಿಲ್ಲಾ ಬ್ಯಾಂಕುಗಳಿಂದ ಹಣ ಸಹಾಯ ದೊರೆಯುತ್ತದೆ.

**ಶ್ರೀ ಎಂ.ವಿ. ಕೃಷ್ಣಪ್ಪ:** ಹಾಲು ಉತ್ಪಾದನೆಯ ಸಂಘಗಳೆಂದು ಮಾಡಿ ಷೇರುಕ್ಯಾಪಿಟಲ್ ಲೋಕಲ್ಲಾಗಿ ಹತ್ತು ಸಾವಿರ ರೂಪಾಯಿಗಳೆಂದು ಮಾಡಿದರೆ ಆಗ ಸುಮಾರು ಒಂದು ಲಕ್ಷ ರೂಪಾಯಿಗಳವರೆಗೂ ಬ್ಯಾಂಕಿನವರು ಸಾಲ ಕೊಡುತ್ತಾರೆ. ಸಾಕಷ್ಟು ಜಮೀನು ಇದ್ದರೆ ಸರ್ಕಾರದವರು ಸಹಾಯ ಮಾಡುತ್ತಾರೆ. ಸುತ್ತಮುತ್ತಲೂ ಕೆಲವು ಜಮೀನುಗಳು ಸುಲಭ ದರದಲ್ಲಿ ಅಪ್‌ಸೆಟ್ ಪ್ರೈಸಿನಲ್ಲಿ ಸಿಗುವುದರಿಂದ ಕೆಲವು ಏಜೆನ್ಸಿಗಳು ಕೊ–ಆಪರೇಟಿವ್ ಡೈರಿಗಳಿಗೆ ಸಹಾಯ ಮಾಡುತ್ತಾರೆ. ವ್ಯಾನುಗಳನ್ನು ಮತ್ತು ಇತರ ಎಕ್ವಿಪ್‌ಮೆಂಟ್‌ಗಳನ್ನು ಕೊಂಡುಕೊಳ್ಳುವುದಕ್ಕೆ ಸಾಲವನ್ನು ಕೊಡುತ್ತಾರೆ. ಫಾರೆನ್ ಏಜೆನ್ಸಿ ಮೂಲಕ ಈ ಡೈರಿಗಳ ಅಭಿವೃದ್ಧಿಗಾಗಿ ಸಹಾಯ ಮಾಡಬೇಕೆಂದು ಪ್ರಯತ್ನ ಮಾಡುತ್ತಿದ್ದಾರೆ.

**ಶ್ರೀ ಹಾರ್ನಳ್ಳಿ ರಾಮಸ್ವಾಮಿ:** 8 ಕೇಂದ್ರಗಳ ಸ್ಥಾಪನೆ ಯಾವ್ಯಾವ ಸ್ಥಳಗಳಲ್ಲಿ

**ಶ್ರೀ ಎಂ.ವಿ. ಕೃಷ್ಣಪ್ಪ:** ನಿರ್ಧಾರವೇನೋ ಆಗಿದೆ. ಐದಾರು ಸ್ಥಳಗಳಲ್ಲಿ ಈಗಾಗಲೆ ಜಮೀನುಗಳನ್ನು ತೆಗೆದುಕೊಂಡು ಕೆಲಸ ನಡೆಯುತ್ತಿದೆ. ಮೊದಲನೆಯದು ಬೆಂಗಳೂರು, ಎರಡೇನೇಯದು ಹುಬ್ಬಳ್ಳಿ– ಧಾರವಾಡಗಳಲ್ಲಿ ಪ್ರಾರಂಭ ಮಾಡಬೇಕಾಗಿತ್ತು. ಈ ಮಧ್ಯೆ ಜಮೀನು ತೆಗೆದುಕೊಳ್ಳಬೇಕಾದ್ದರಿಂದ ಅವು ಇನ್ನೂ ಪ್ರಾರಂಭವಾಗಿಲ್ಲ. ಪ್ರಾರಂಭವಾಗಿರತಕ್ಕದ್ದು ಶಿವಮೊಗ್ಗ, ಭದ್ರಾವತಿ, ದಾವಣಗೆರೆಯಲ್ಲಿ ಒಂದು ಕೊ–ಆಪರೇಟಿವ್ ಡೈರಿ ಇನ್‌ಸ್ಟಿಟ್ಯೂಟ್ ಪ್ರಾರಂಭವಾಗಿದೆ. ಅದಾಗಿ ಒಂದೂವರೆ ವರ್ಷಗಳಾದವು. ಕೂರ್ಗಿನಲ್ಲಿ ಮೊದಲಿನಿಂದಲೂ ನಡೆಯುತ್ತಿದೆ. ಮಂಗಳೂರಿನಲ್ಲಿ ಪ್ರಾರಂಭವಾಗಿಲ್ಲ. ಲ್ಯಾಂಡ್ ಇನ್ನೂ ಅಕ್ವೈರು ಮಾಡಿಕೊಳ್ಳುವುದರಲ್ಲಿದ್ದೇವೆ.

**ಶ್ರೀ ಹಾರ್ನಳ್ಳಿ ರಾಮಸ್ವಾಮಿ:** ಹಾಸನದಲ್ಲಿ ಈ ರೀತಿಯಾದಂಥ ಒಂದು ಹಾಲಿನ ಕೇಂದ್ರವನ್ನು ಪ್ರಾರಂಭಿಸಬೇಕೆಂದು ಅಲ್ಲಿನ ಜನಗಳಿಂದ ಬಹಳ ದಿವಸಗಳಿಂದ ಒತ್ತಾಯ ಬರುತ್ತಿಲ್ಲವೇ?

**ಶ್ರೀ ಎಂ.ವಿ. ಕೃಷ್ಣಪ್ಪ:** ಸುಮಾರು ಒಂದು ಲಕ್ಷ ಜನಸಂಖ್ಯೆ ಇರುವ ಸ್ಥಳಗಳಲ್ಲಿ ಅದನ್ನು ಪ್ರಾರಂಭ ಮಾಡಬೇಕೆಂದಿದ್ದೇವೆ. ಆ ರೀತಿಯಾಗಿ ಈಗಾಗಲೇ 8 ಸ್ಥಳಗಳಲ್ಲಿ ಹಾಲಿನ ಕೇಂದ್ರಗಳನ್ನು ಸೆಲೆಕ್ಟ್ ಮಾಡಿದ್ದೇವೆ. ಈ ಯೋಜನೆಯನ್ನು ಮುಂದೆ ಎಲ್ಲಾ ಜಿಲ್ಲೆಗಳಿಗೂ ಅನ್ವಯಿಸುವಂತೆ ಮಾಡುತ್ತೇವೆ.

**ಶ್ರೀ ಎಂ.ವಿ. ಕೃಷ್ಣಪ್ಪ:** ನಾವು ಮೊದಲು ಬೆಂಗಳೂರಿನಲ್ಲಿ ಒಂದು ಲಕ್ಷ ಪೌಂಡಿನ ಹಾಲಿನ ಕೇಂದ್ರವನ್ನು ಪ್ರಾರಂಭ ಮಾಡುತ್ತೇವೆ. ಬೆಂಗಳೂರು ನಗರಕ್ಕೆ 5 ಲಕ್ಷ ಪೌಂಡ್ ಹಾಲು ಬೇಕಾಗುತ್ತದೆ. 5 ಲಕ್ಷ ಹಾಲನ್ನು ಸರಬರಾಜು ಮಾಡುವಷ್ಟು ಶಕ್ತಿಯನ್ನು ನಾವು ಪಡೆಯಬೇಕಾದರೆ 5–6 ವರ್ಷಗಳಾಗುತ್ತವೆ. ಈಗ ಬೆಂಗಳೂರಿನ ಹಾಲಿನ ಯೋಜನೆ ತಯಾರಾಗುತ್ತಿದೆ. ಮೂರು ಜಿಲ್ಲೆಗಳಲ್ಲಿ ಸುಮಾರು 800 ಕೋ–ಆಪರೇಟಿವ್ ಸೊಸೈಟಿಗಳಿಗೆ ಹಣವನ್ನು ಕೊಟ್ಟು ಹಸುಗಳನ್ನು,

ಗೂಳಿಗಳನ್ನು ಸಪ್ಲೈ ಮಾಡಿ ಆ ಹಾಲಿನ ಸೊಸೈಟಿಗಳು ಅಭಿವೃದ್ಧಿಯಾಗಬೇಕಾದರೆ 5-6 ವರ್ಷ ಬೇಕಾಗುತ್ತದೆ. 5-6 ವರ್ಷಗಳಲ್ಲಿ 5 ಲಕ್ಷ ಪೌಂಡ್ ಹಾಲನ್ನು ಪ್ರೊಕ್ಯೂರ್ ಮಾಡಿ ಅದನ್ನು ಹ್ಯಾಂಡಲ್ ಮಾಡುವಷ್ಟು ಶಕ್ತಿ ಇದೆ. ಆದರೆ ಬೆಂಗಳೂರು ನಗರ ಬಹಳ ದೊಡ್ಡದಾಗಿ ಬೆಳೆಯುತ್ತಿದೆ. ಆದ್ದರಿಂದ ಬೆಂಗಳೂರಿಗೆ ಪೂರ್ತಿ ರಿಕ್ವೈರ್‌ಮೆಂಟ್ಸ್ ಮೀಲ್ ಮಾಡುವ ಶಕ್ತಿ ಸರ್ಕಾರಕ್ಕೆ ಬರುವುದಿಲ್ಲ. ಆದ್ದರಿಂದ ಸರ್ಕಾರದವರು ಪ್ರಾರಂಭ ಮಾಡತಕ್ಕ ಹಾಲಿನ ಕೇಂದ್ರದ ಜೊತೆಗೆ ಬೇರೆಯವರೂ ಸಹ ಇರಲೇಬೇಕಾಗುತ್ತದೆ.

**ಶ್ರೀಮತಿ ಎಂ.ಆರ್. ಲಕ್ಷಮ್ಮ:** ತಾವು ಸರಬರಾಜು ಮಾಡುವ ಹಾಲು ಈಗಿನ ಡೈರಿಯವರು ಕೊಡುವ ಹಾಲಿನ ಬೆಲೆಗೇ ಮಾರುತ್ತೀರೋ ಅಥವಾ ಹೆಚ್ಚು ಕಡಿಮೆ ಆಗುತ್ತದೆಯೋ?

**ಶ್ರೀ ಎಂ.ವಿ. ಕೃಷ್ಣಪ್ಪ:** ನಾವು ಅದನ್ನು ಪ್ರಾರಂಭ ಮಾಡುವಾಗ ರೈತರಿಗೆ ಎಷ್ಟು ಕೊಡಬೇಕು ನಾವು ಎಷ್ಟು ಪ್ರಾಫಿಟ್ ತೆಗೆದುಕೊಳ್ಳಬೇಕು ಎಂಬುದನ್ನು ತೀರ್ಮಾನ ಮಾಡಿ ಅದನ್ನು ಪ್ರಾರಂಭ ಮಾಡುತ್ತೇವೆ.

**ಶ್ರೀ ಕೆ.ಆರ್. ಆಚಾರ್:** ಈಗಾಗಲೆ ಮಾನ್ಯ ಮಂತ್ರಿಗಳು ಅಪ್ಪಣೆ ಕೊಡಿಸಿದಂತೆ ಗೋಮಾಳಗಳು ಬೇಡ ಎನ್ನುವ ಅಭಿಪ್ರಾಯಪಟ್ಟಂತೆ ಇದೆ. ಈ ಬಗ್ಗೆ ಸರ್ಕಾರದ ಅಭಿಪ್ರಾಯವೇನು?

**ಶ್ರೀ ಎಂ.ವಿ. ಕೃಷ್ಣಪ್ಪ:** ಅದು ಬಹಳ ಕಾಂಟ್ರವರ್ಷಿಯಲ್ ಸಬ್ಜೆಕ್ಟ್ ಇದೆ. ನಾನು ನೋಡಿದರಲ್ಲಿ ಯಾವ ಯಾವ ದೇಶದಲ್ಲಿ ಈಗ ಪಶುಗಳು ಚೆನ್ನಾಗಿವೆಯೋ ಅಲ್ಲಿ ಜನಗಳು ಹುಲ್ಲು ತರುವುದಕ್ಕೆ ಹೊರಗಡೆ ಹೋಗುವುದಿಲ್ಲ. ಡೇನ್ಮಾರ್ಕ್, ನಾರ್ವೇ ಈ ಪ್ರದೇಶದಲ್ಲಿ ತಮಗೆ ಸೇರಿದ 5-6 ಎಕರೆ ಜಮೀನಿನಲ್ಲಿ ಫಾಡರ್ ಬೆಳೆಯುತ್ತಾರೆ. ಅವರು ತಮ್ಮ ದನಗಳನ್ನು ಬಿಡುವುದಿಲ್ಲ ಅವರು ತಮ್ಮ ಜಮೀನಿಗೆ ಬೇಲಿ ಹಾಕಿಕೊಂಡಿರುತ್ತಾರೆ. ಅಲ್ಲಿ ಗೋಮಾಳಗಳು ಇಲ್ಲವೇ ಇಲ್ಲ. ಗೋಮಾಳ ಎಲ್ಲಿದೆಯೋ ಅಲ್ಲಿ ದನಗಳು ಬಡತಾಗಿವೆ.

* * * * *

# ರಾಜ್ಯದಲ್ಲಿ ಅಕ್ಕಿ ಗಿರಣಿಗಳ ಆರಂಭ
# 1965

**ಮೈಸೂರು ರಾಜ್ಯದಲ್ಲಿ ಅಕ್ಕಿ ಗಿರಣಿಗಳ ಆರಂಭಕ್ಕೆ ಎಂ.ವಿ. ಕೃಷ್ಣಪ್ಪನವರು ಕಂದಾಯ ಸಚಿವರಾಗಿದ್ದಾಗ ಅನುಮತಿಯನ್ನು ನೀಡಿದರು ಇದಕ್ಕೆ ಸಂಬಂಧಿಸಿದಂತೆ ಮೇಲ್ಮನೆಯಲ್ಲಿ ಶ್ರೀಯುತರು ಉತ್ತರಿಸಿದ ಸಂಕ್ಷಿಪ್ತ ಭಾಗ:**

**ಶ್ರೀ ಕೆ. ಚನ್ನಬಸವನಗೌಡ:** ಅಕ್ಕಿಗಿರಣಿ ಪ್ರಾರಂಭ ಮಾಡಬೇಕಾದರೆ ಸರ್ಕಾರದ ನೀತಿ ಏನಿದೆ ಎಂಬುದನ್ನು ಹೇಳುತ್ತೀರಾ?

**ಶ್ರೀ ಎಂ.ವಿ. ಕೃಷ್ಣಪ್ಪ:** ಅರ್ಜಿಗಳು ಬಂದಾಗ ಸಹಕಾರಿ ಸಂಘ ಯಾವುದಾದರೂ ಹಾಕಿದ್ದರೆ ಒಂದು ಮಿಲ್ಲು ಅಗಬೇಕಾಗಿದ್ದರೆ ಸಹಕಾರಿ ಸಂಘಕ್ಕೆ ಆದ್ಯತೆಯನ್ನು ಕೊಡುತ್ತೇವೆ. ಎರಡು ಮಿಲ್ ಬೇಕಾಗಿದ್ದರೆ ಅಲ್ಲಿ ಸಾಕಾದಷ್ಟು ಭತ್ತ ಬರುತ್ತದೆ ಎಂದರೆ ಎರಡಕ್ಕೂ ಅವಕಾಶ ಕೊಡುತ್ತೇವೆ.

**ಶ್ರೀ ಕೆ. ಚೆನ್ನಬಸವನಗೌಡ:** ಮಾರ್ಕೆಟಿಂಗ್ ಸೊಸೈಟಿ ಇದ್ದರೂ ಭತ್ತ ಬೆಳೆಯುವ ಕ್ಷೇತ್ರ ಜಾಸ್ತಿ ಇದ್ದರೆ ಇನ್ನೊಂದು ಸೊಸೈಟಿ ಮಾಡಲಿಕ್ಕೆ ಏಕೆ ಆಸ್ಪದ ಕೊಡಬಾರದು?

**ಶ್ರೀ ಎಂ.ವಿ. ಕೃಷ್ಣಪ್ಪ:** ಅದನ್ನು ನಾವು ಹೇಳುವುದಕ್ಕಾಗುವುದಿಲ್ಲ. ಕೋ–ಆಪರೇಟಿವ್ ಡಿಪಾರ್ಟಮೆಂಟಿನವರನ್ನು ಕೇಳಬೇಕು. ತುಂಗಭದ್ರಾ ಪ್ರಾಜೆಕ್ಟ್ ಏರಿಯಾದಲ್ಲಿ ಬಹಳ ಭತ್ತ ಬೆಳೆಯುವುದಕ್ಕೆ ಪ್ರಾರಂಭ ಮಾಡಿದ್ದಾರೆ. ಈಗ ಅಲ್ಲಿರುವ ಗಿರಣಿಗಳು ಸಾಲದು, ಬಹಳ ಕಡಿಮೆ ಇವೆ ಗಂಗಾವತಿ ಕಡೆಯಿಂದ ಬೆಂಗಳೂರು, ಕೋಲಾರ ಕಡೆಗಳಿಗೆಲ್ಲಾ ಭತ್ತವನ್ನು ತೆಗೆದುಕೊಂಡು ಹೋಗುತ್ತಿದ್ದಾರೆ. ಅಲ್ಲಿ ಸಾಕಷ್ಟು ಮಿಲ್‌ಗಳಿವೆ. ಮಿಲ್‌ಗಳಿಗೆ ಪರಿಮಿಟ್‌ಬೇಕೆಂದು ಅಪ್ಲೈ ಮಾಡಿದರೆ ಕೊಡುವುದಕ್ಕೆ ನಮ್ಮ ಡಿಪಾರ್ಟಮೆಂಟಿನವರು ಪ್ರಯತ್ನ ಮಾಡುತ್ತೇವೆ.

**ಶ್ರೀ ಆರ್.ಎಸ್. ಮಹಾಂತ ಶೆಟ್ಟಿ:** ಯಾರಾದರೂ ಹಲ್ಲರ್ಸ್ ಹಾಕುತ್ತೇವೆಂದು ಮುಂದೆ ಬರುವುದಾದರೆ ಅವರಿಗೆ ಪರ್ಮಿಷನ್ ಕೊಡುವುದಕ್ಕೆ ಏನು ಕಷ್ಟವಿದೆ?

**ಶ್ರೀ ಎಂ.ವಿ. ಕೃಷ್ಣಪ್ಪ:** ಪೂರ್ವದಿಂದಲೂ ಲೈಸನ್ಸ್ ಇಲ್ಲದೆ, ಹಲ್ಲರ್ಸ್ ಭತ್ತದ ಮಿಲ್ಲುಗಳು, ಗಿರಣಿಗಳನ್ನು ನಡೆಸುತ್ತಾ ಇದ್ದರು. ಗೌರ್ನಮೆಂಟ್ ಆಫ್ ಇಂಡಿಯಾದವರು Rice Milling Act ಎಂದು ಹೇಳಿ 1958ರಲ್ಲಿ ಒಂದು Act ತೆಗೆದುಕೊಂಡು ಬಂದರು. ಅದರ ಪ್ರಕಾರ ಸ್ಟೇಟ್ ಗೌರ್ನಮೆಂಟ್‌ನವರಿಗೆ ಕೆಲವು ಪವರ್ಸ್‌ನ್ನು ಡೆಲಿಗೇಟ್ ಮಾಡಿದ್ದಾರೆ. ಪೂರ್ವದಿಂದ ನಡೆಸುತ್ತಾ ಇದ್ದವರೂ ಕೂಡ ಪರ್ಮಿಟ್‌ಗೆ ಹಾಕಬೇಕು, ಪರ್ಮಿಷನ್ ತೆಗೆದುಕೊಳ್ಳಬೇಕು. ಕೋ–ಆಪರೇಟಿವ್ಸ್‌ನವರು ಯಾರಾದರೂ ಬಂದರೆ ಅವರಿಗೂ ಅವಕಾಶ ಕೊಡುತ್ತೇವೆ.

* * * * *

# ಮೈಸೂರು ರಾಜ್ಯದ ಭೂ ಕಂದಾಯ ವಿಧೇಯಕ ಬಿಲ್
# 1965

**ಹಿಂದಿನ ವರ್ಷಗಳಲ್ಲಿ ಎಂ.ವಿ. ಕೃಷ್ಣಪ್ಪ ಅವರು ಕಂದಾಯ ಸಚಿವರಾಗಿ ಜಾರಿಗೆ ತಂದಿದ್ದ 'ಭೂ ಕಂದಾಯ'ದ ಬಗ್ಗೆ ಎಲ್ಲ ಸದಸ್ಯರು ಒಪ್ಪಿಗೆ ಸೂಚಿಸಿದದರು. 1965ರಲ್ಲಿ ಮತ್ತೆ ಮೇಲ್ಮನೆಯಲ್ಲಿ ಕಂದಾಯಕ್ಕೆ ಸಂಬಂಧಿಸಿದಂತೆ ನಡೆಸಿದ ಚರ್ಚೆ**

**ಶ್ರೀ ಎಂ.ವಿ. ಕೃಷ್ಣಪ್ಪ (ಕಂದಾಯ ಸಚಿವರು):** ಲ್ಯಾಂಡ್ ರೆವಿನ್ಯೂ ಕೋಡ್ ಅಥವಾ ಲ್ಯಾಂಡ್ ರೆವಿನ್ಯೂ ಆಕ್ಟನ್ನು ಈ ಮಾನ್ಯ ಸಭೆ ಕಳೆದ ಸಾಲಿನಲ್ಲಿ ಪಾಸ್ ಮಾಡಿ ಅದು ಏಪ್ರಿಲ್‌ನಿಂದ ಜಾರಿಗೆ ಬಂದಿದೆ. ಕಂದಾಯದ ರಿವಿಜನ್ ಸೆಟಲ್‌ಮೆಂಟ್ ನಡೆದಾಗ ಯಾವ ಆಧಾರದ ಮೇಲೆ ಕಂದಾಯವನ್ನು ಹಾಕಬೇಕೆಂಬ ಒಂದು ಕ್ಲಾಸ್ ಅದರಲ್ಲಿದೆ. ಆ ಕ್ಲಾಸ್‌ನಲ್ಲಿ ಆರೂ ಕಾಲು ಪರ್ಸೆಂಟ್ ಹಾಕಬೇಕೆಂದು ಅದರಲ್ಲಿ ನಿರ್ದೇಶನ ಕೊಟ್ಟಿದೆ. ಅದರ ಪ್ರಕಾರ ರಿವಿಜನ್ ಸೆಟಲ್‌ಮೆಂಟ್ ರೀಪೋರ್ಟು ತಯಾರಾಯಿತು. ಸರ್ವೆ ಸೆಟಲ್‌ಮೆಂಟ್ ಮತ್ತು ಡಿವಿಜನ್ ಸೆಟಲ್‌ಮೆಂಟ್ 7–8 ವರ್ಷದಲ್ಲಿ ಪ್ರಾರಂಭವಾಗಿ ವಿವರಗಳನ್ನು ವರ್ಕ್ ಔಟ್ ಮಾಡಿಕೊಂಡು ಕಾದಿದ್ದರು. ಆಕ್ಟ್ ಆದ ತಕ್ಷಣ ಆರೂ ಕಾಲು ಪರ್ಸೆಂಟ್‌ನಂತೆ ಕಲೆಕ್ಟ್ ಮಾಡಬೇಕಾಯಿತು. ಆ ವರದಿಯನ್ನು ಈ ಸಭೆಯ ಮುಂದೆ ಮತ್ತು ಅಸೆಂಬ್ಲಿಯ ಮುಂದೆ ಇಟ್ಟು ಅದರ ಬಗ್ಗೆ ಚರ್ಚೆ ನಡೆದದ್ದು ತಮಗೆಲ್ಲಾ ಗೊತ್ತಿದೆ. ಸರ್ವೆ ಸೆಟಲ್‌ಮೆಂಟ್ ರಿಪೋರ್ಟ್ ಬಹಳ ಭಾರಿಯಾದಂತಹ ಒಂದು ವಾಲ್ಯೂಮಿನಸ್ ರಿಪೋರ್ಟು ಅದರಲ್ಲಿ ಒಟ್ಟಿನಲ್ಲಿ ಆರೂ ಕಾಲು ಪರ್ಸೆಂಟ್ ಡ್ರೈಲ್ಯಾಂಡ್ ಮೇಲೆ, ಗಾರ್ಡನ್‌ಲ್ಯಾಂಡ್ ಮೇಲೆ ಮತ್ತು ವೆಟ್‌ಲ್ಯಾಂಡ್ ಮೇಲೆ ಹಾಕಿದ್ದಾರೆ. ಅದರ ಪ್ರಕಾರ ಕಂದಾಯ ಮೂರು ಮುಕ್ಕಾಲು ಕೋಟಿ ರೂಪಾಯಿ ಜಾಸ್ತಿಯಾಗುತ್ತದೆ. ಹಿಂದೆ ಮೂರುವರೆ ಮೂರು ಮುಕ್ಕಾಲು ಕೋಟಿ ರೂಪಾಯಿ ಇದ್ದದ್ದು ಇನ್ನೂ ಮೂರು ಮುಕ್ಕಾಲು ಕೋಟಿ ರೂಪಾಯಿ ಜಾಸ್ತಿಯಾಗುತ್ತದೆ, ಅಷ್ಟು ತಡೆದುಕೊಳ್ಳುವ ಶಕ್ತಿ ರೈತರಿಗೆ ಇಲ್ಲ. ಅದರಲ್ಲೂ ಆಹಾರದ ಅಭಾವ ಇದ್ದು ದೇಶದಲ್ಲಿ ರೈತರು ಹೆಚ್ಚು ಆಹಾರ ಬೆಳೆಯುವುದು ಬಹಳ ಪ್ರಾಮುಖ್ಯವಾದ ಕೆಲಸ. ಆದ್ದರಿಂದ ರೈತರಿಗೆ ಸಾಕಾದಷ್ಟು ತೆರಿಗೆಯನ್ನು ಕಡಿಮೆ ಮಾಡಿ – ತೆರಿಗೆ ಹಾಕುವುದಂತೂ ಅನಿವಾರ್ಯ ಹಾಕಲೇಬೇಕಾಗುತ್ತದೆ. ಭೂ ಕಂದಾಯದ ತೆರಿಗೆ ನೇರವಾಗಿ ರೈತರ ಮೇಲೆ ಬೀಳುತ್ತದೆ. ಇದನ್ನು ಸಾಧ್ಯವಾದಷ್ಟು ಕಡಿಮೆಯಾಗಿ ದೇಶದ ಹಿತದೃಷ್ಟಿಯಿಂದ ಹಾಕುವುದು ಒಳ್ಳೆಯದು ಎಂದು ಹೇಳಿ ಆರೂ ಕಾಲು ಪರ್ಸೆಂಟ್ ಇದ್ದುದನ್ನು 4 ಪರ್ಸೆಂಟ್‌ಗೆ ಇಳಿಸಿದ್ದೇವೆ. ಇದರ ಪ್ರಕಾರ ಡ್ರೈಲ್ಯಾಂಡ್ ಮೇಲೆ ಆರೂಕಾಲು ಪರ್ಸೆಂಟ್ ಹಾಕಿದ್ದರೆ ಎರಡು ಕೋಟಿ ಮೂವತ್ತು ಲಕ್ಷ ರೂಪಾಯಿ ಬರುತ್ತಾ ಇದ್ದದ್ದು ಅದು ಡಬ್ಬಲ್ ಆಗುತ್ತಾ ಇತ್ತು.

ಈಗ ಅದನ್ನು 4 ಪರ್ಸೆಂಟ್‌ಗೆ ಇಳಿಸುವುದರಿಂದ ಅದು ಬಹಳ ಮಟ್ಟಿಗೆ ಕಡಿಮೆಯಾಗುತ್ತದೆ. 87 ಲಕ್ಷ ರೂಪಾಯಿ ಮಾತ್ರ ಹೆಚ್ಚು ಮಾಡಿದ ಹಾಗಾಗುತ್ತದೆ. ಈಗ ಡ್ರೈ ಅಸೆಸ್‌ಮೆಂಟ್ ಕಂದಾಯ ಬರುತ್ತಾ ಇರುವುದು ಎರಡು ಕೋಟಿ ನಲವತ್ತು ಲಕ್ಷ ರೂಪಾಯಿ. 4 ಪರ್ಸೆಂಟ್‌ನಂತೆ ಲೆಕ್ಕಾಚಾರ ಮಾಡಿದರೆ ಅದು 3 ಕೋಟಿ 27 ಲಕ್ಷ ರೂಪಾಯಿ ಆಗುತ್ತದೆ, ಎಂದರೆ 87 ಲಕ್ಷ ರೂಪಾಯಿ ಮಾತ್ರ ಹೆಚ್ಚಾಗುತ್ತದೆ. ಅಂದರೆ ಅದು ಸುಮಾರು 40 ಪರ್ಸೆಂಟ್ ಕೂಡ ಹೆಚ್ಚಾದ ಹಾಗೆ ಆಗುವುದಿಲ್ಲ.

ಇನ್ನೊಂದು ಸ್ವಾರಸ್ಯ ಎಂದರೆ ಈಗ ರೈತರು ಕೊಡುತ್ತಾ ಇರುವ ಕಂದಾಯವನ್ನು ಅನೇಕ ಕಡೆ ಕಡಿಮೆ ಮಾಡುತ್ತೇವೆ ಎಂದರೆ ಇದು ಸೈನ್‌ಟಿಫಿಕ್ ಬೇಸಿಸ್ ಆದ್ದರಿಂದ ಒಟ್ಟು ಉತ್ಪನ್ನದ ಮೇಲೆ 4 ಪರ್ಸೆಂಟ್‌ನಂತೆ ಲೆಕ್ಕಾಚಾರ ಹಾಕುವುದರಿಂದ ಅನೇಕ ಕಡೆ ಕಂದಾಯ ಹೆಚ್ಚಾಗುವುದಕ್ಕಿಂತಲೂ ಅದು ಕಡಿಮೆಯಾಗುತ್ತದೆ. ಆದ್ದರಿಂದ ಈ ಬಿಲ್ಲಿಗೆ ಇದ್ದಂತಹ ಕೆಟ್ಟ ಹೆಸರು ಹೋಯಿತು. ಯಾವಾಗಲೂ ಕಂದಾಯ ಹೆಚ್ಚು ಮಾಡುವುದಕ್ಕೆ ಬಿಲ್ಲು ತರುತ್ತಾರೆ ಎಂದು ಹೇಳುತ್ತಾ ಇದ್ದರು. ಕಂದಾಯವನ್ನು ಕಡಿಮೆಯಾಗಿಯೂ ಮಾಡುತ್ತೇವೆ ಎಂಬುದನ್ನು ಈ ಬಿಲ್‌ನಿಂದ ತೋರಿಸಿ ಕೊಟ್ಟ ಹಾಗೆ ಆಗಿದೆ. ಉದಾಹರಣೆಗೆ ಹೇಳುವುದಾದರೆ ಮಾನ್ಯ ಸದಸ್ಯರಾದ ಶ್ರೀಮಾನ್ ಶ್ರೀನಿವಾಸ ಶೆಟ್ಟರ ಡಿಸ್ಟ್ರಿಕ್ಟ್‌ನಲ್ಲಿ ಡ್ರೈ ಅಸೆಸ್‌ಮೆಂಟ್ 20 ಪರ್ಸೆಂಟ್ ಕಡಿಮೆಯಾಗುತ್ತದೆ. ಇದುವರೆಗೂ ಅಲ್ಲಿ ಏನೂ ಬೆಳೆಯುತ್ತಲೇ ಇರಲಿಲ್ಲ. ಆದರೂ ಕೂಡ ಡ್ರೈಲ್ಯಾಂಡ್ ಅಂತ ಹೇಳಿ ಸೌತ್ ಕೆನರಾ, ನಾರ್ತ್ ಕೆನರಾ ಮತ್ತು ಮಲೆನಾಡಿನಲ್ಲಿ ಇದ್ದಂಥ ಖುಷ್ಕಿ ಲ್ಯಾಂಡ್‌ಗೆ ಡ್ರೈ ಅಸೆಸ್‌ಮೆಂಟ್ ಅಂತ ಹೇಳಿ ಏನೋ ಒಂದು ತೀರ್ವೆ ಹಾಕುತ್ತಾ ಇದ್ದರು. ಅದಕ್ಕೆ ಯಾವ ಒಂದು ಆಧಾರವೂ ಇರಲಿಲ್ಲ. ಈಗ ಶಾಸ್ತ್ರೀಯವಾಗಿ ನಾಲ್ಕು ಪರ್ಸೆಂಟ್‌ನಂತೆ ವಸೂಲು ಮಾಡುವುದರಿಂದ ಅದು ರೆಡ್ಯೂಸ್ ಆಗುತ್ತದೆ. ಬೆಂಗಳೂರಿನ ಸುತ್ತಮುತ್ತಲ ಪ್ರದೇಶದ ವಿಷಯ ಹೇಳುವುದಾದರೆ ಕೆಲವು ಕಡೆ 20–30–40 ಪರ್ಸೆಂಟ್ ಜಾಸ್ತಿಯಾಗುತ್ತದೆ. ಒಟ್ಟಿನಲ್ಲಿ 40 ಪರ್ಸೆಂಟ್ ಜಾಸ್ತಿಯಾಗುತ್ತದೆ. ಶಿವಮೊಗ್ಗಾದಲ್ಲಿ ಜಾಸ್ತಿಯಾಗುವುದಿಲ್ಲ, ಆ ವಿವರ ಹೇಳುತ್ತೇನೆ. ಮಲೆನಾಡಿನಲ್ಲಿ ಇನ್ನೊಂದು ಅನುಕೂಲ ಇದೆ. ಮಲೆನಾಡಿನಲ್ಲಿ ಒಂದು ಮಿಲಿಯನ್ ಎಕರ್ಸ್ ವೆಟ್‌ಲ್ಯಾಂಡ್ ಇದೆ. ಅದಕ್ಕೆ ನಾವು ನೀರನ್ನು ಕೊಡುವುದಿಲ್ಲ. ಮಳೆ ನೀರಿನಿಂದ ಬೆಳೆಯಾಗುತ್ತದೆ. ಅದಕ್ಕೆ ತೀರ್ವೆ ಹೆಚ್ಚಾಗಿ ಹಾಕಬಾರದು, ಅದು ಭತ್ತ ಬೆಳೆಯುವ ಭೂಮಿ, ಮಲೆನಾಡಿನಲ್ಲಿ ರೈತರು ಕೋವಿ ಇಟ್ಟುಕೊಂಡು ರಾತ್ರಿ ಹೊತ್ತು ಬೆಳೆಯನ್ನು ಕಾಯುತ್ತಾ ಇರುತ್ತಾರೆ, ಮೃಗಗಳಿಂದ ಆಗತಕ್ಕ ಹಾವಳಿಯನ್ನು ತಪ್ಪಿಸಿಕೊಂಡು ಬೆಳೆಯನ್ನು ಬೆಳೆಯಬೇಕು ಅಂತಹ ಸ್ಥಳದಲ್ಲಿ ಬತ್ತವನ್ನು ಬೆಳೆಯತಕ್ಕ ಜನಗಳಿಗೆ ಹೆಚ್ಚು ತೀರ್ವೆ ಹಾಕಬಾರದು ಎಂದು ಹೇಳಿ ಭಾವನೆ ಮಾಡಲಾಗಿದೆ. ಅಂತಹ ಜಮೀನು ಒಂದು ಮಿಲಿಯನ್ ಎಕರ್ಸ್ ಇದೆ. ಅದಕ್ಕೆ Rainfed Wet Land ಅಂತ ಹೇಳುತ್ತಾರೆ. ಅದಕ್ಕೆ ಮಳೆಯಿಂದ ನೀರು ಬರುತ್ತದೆಯೇ ಹೊರತು, ನಾವು ಯಾವ ಕೆರೆ ಕುಂಟೆ ಕಟ್ಟೆಯನ್ನೂ ಕೂಡ ಕಟ್ಟಿ ನೀರನ್ನು ಕೊಡುತ್ತಾ ಇಲ್ಲ. ಅಂತಹ ಜಮೀನು ಖಾನಾಪುರದಿಂದ ಬೆಳಗಾಂ, ನಾರ್ತ್ ಕೆನರಾ ಮತ್ತು ಧಾರವಾಡ ಜಿಲ್ಲೆಯ ಕೆಲವು ಭಾಗ, ಶಿವಮೊಗ್ಗ, ಚಿಕ್ಕಮಗಳೂರು, ಕೊಡಗು ಸೌತ್ ಕೆನರಾ ಈ ಎಲ್ಲಾ ಭಾಗದಲ್ಲೂ ಕೂಡ

ಒಂದು ಮಿಲಿಯನ್ ಎಕರೆ ಇದೆ. ಅದಕ್ಕೆ ಕಂದಾಯ ಬಹಳ ಕಡಿಮೆ ಬೀಳುತ್ತದೆ, 20 ಪರ್ಸೆಂಟ್‌ಗಿಂತ ಕಡಿಮೆ ಆಗುತ್ತದೆ. ಒಂದು ರೂಪಾಯಿ ಕೊಡುತ್ತಾ ಇದ್ದರೆ, ಇನ್ನ ಮೇಲೆ ಒಂದು ರೂಪಾಯಿ ಇಪ್ಪತ್ತು ಪೈಸೆ ಕೊಡುತ್ತಾನೆ. ಮೊದಲು ಅವರು 33 ಲಕ್ಷ ರೂಪಾಯಿ ಕಂದಾಯ ಕೊಡುತ್ತಾ ಇದ್ದರು ಈಗ 4 ಪರ್ಸೆಂಟ್‌ನಂತೆ ರಿವೈಸ್ ಮಾಡಿದ್ದರಿಂದ 39 ಲಕ್ಷ ರೂಪಾಯಿ ಕಂದಾಯ ಕೊಡುತ್ತಾ ಇದ್ದರು ಈಗ 4 ಪರ್ಸೆಂಟ್‌ನಂತೆ ರಿವೈಸ್ ಮಾಡಿದ್ದರಿಂದ 39 ಲಕ್ಷ ರೂಪಾಯಿ ಕೊಡಬೇಕಾಗುತ್ತದೆ. ಅದು 33 ಲಕ್ಷ ರೂಪಾಯಿನಿಂದ 39 ಲಕ್ಷ ರೂಪಾಯಿ ಆಗುತ್ತದೆ, ಅಂದರೆ 6 ಲಕ್ಷ ರೂಪಾಯಿ ಮಾತ್ರ ಜಾಸ್ತಿಯಾದ ಹಾಗೆ ಆಯಿತು. ಶಿವಮೊಗ್ಗಾದಲ್ಲಿ ಮತ್ತು ಮಲೆನಾಡು ಪ್ರಾಂತ್ಯಗಳಲ್ಲಿ ಹೆಚ್ಚು ಬತ್ತ ಬೆಳೆಯಬೇಕಾಗಿದೆ. ಇದರಿಂದ ಅವರಿಗೆ ತೊಂದರೆಯಾಗುವುದು ಕಡಿಮೆಯಾದ ಹಾಗೆ ಆಯಿತು.

**Sri A.R. BADRINARAYAN (Teachers' Constituency):** Does the rainfed wet lands include lands under small tanks?

**ಶ್ರೀ ಎಂ.ವಿ. ಕೃಷ್ಣಪ್ಪ:** ಅದನ್ನು ಕ್ಲಾಸಿಫೈ ಮಾಡಿದ್ದಾರೆ. ಒಟ್ಟಿನಲ್ಲಿ ಒಂದು ಮಿಲಿಯನ್ ಎಕರ್ ರೇನ್ ಫೆಡ್‌ನಲ್ಲಿ ಬರುತ್ತದೆ. ಅದಕ್ಕೆ ನಾವೇನೂ ನೀರನ್ನು ಕೊಡುತ್ತಾ ಇಲ್ಲ. ಅದರಲ್ಲಿ ಅರಿಕನಟ್, ಕೋಕೋನಟ್ ಗಾರ್ಡನ್ಸ್ ಸೇರಿಕೊಳ್ಳುತ್ತವೆ. ಈಗ ರೈನ್‌ಫೆಡ್ ಗಾರ್ಡನ್ 1 ಲಕ್ಷ 15 ಸಾವಿರ ಎಕರೆ ಇದೆ. ಆ ಜಮೀನಿನವರು 7 ಲಕ್ಷ ರೂಪಾಯಿ ಕಂದಾಯ ಕೊಡುತ್ತಿದ್ದಾರೆ. ಅಡಿಕೆ, ತೆಂಗು ಬೆಳೆಸಿರುವ ತೋಟಗಳವರು ಸರಾಸರಿ 7–8 ರೂಪಾಯಿ ಕಂದಾಯ ಈಗ ಕೊಡುತ್ತಿದ್ದಾರೆ. ಅವರಿಗೆ ಶೇಕಡ 4ರಂತೆ ಕಂದಾಯ ವಿಧಿಸಿದರೆ ಮುಂದೆ ಈಗ ಕೊಡುವುದರ ಎರಡರಷ್ಟು ಕೊಡಬೇಕಾಗುತ್ತದೆ. ಅಡಿಕೆ ಬೆಲೆ 10–15 ವರ್ಷಗಳಿಂದ ಬಹಳ ಏರಿದೆ, ಈ ದಿವಸ ಮೂಟೆಗೆ 400 ರೂಪಾಯಿ ಬೆಲೆ ಆಗಿದೆ. ಆದುದರಿಂದ ಅಡಿಕೆ ತೋಟದವರು ಒಂದಕ್ಕೆ ಎರಡರಷ್ಟು ಕಂದಾಯ ಕೊಡಬಹುದು. ಪ್ಲಾಂಟರ್ಸ್ ಶ್ರೀಮಂತರು ಅವರ ಮೇಲೆ ಹೆಚ್ಚು ತೆರಿಗೆ ಹಾಕಿ ಎಂದು ಗುಂಪಿನವರು ಹೇಳುತ್ತಿದ್ದಾರೆ. ಆದರೆ ಅಕ್ಕ–ಪಕ್ಕದ ಪ್ರಾಂತ್ಯಗಳಾದ ಕೇರಳ, ಮದ್ರಾಸುಗಳಲ್ಲೂ ಕಾಫಿ ತೋಟಗಳಿವೆ, ಕೇರಳಾದವರು ಎಕರೆಗೆ ಎರಡರಿಂದ ಎರಡೂಕಾಲು ರೂಪಾಯಿಗಳವರೆಗೆ ಕಾಫಿ ತೋಟಕ್ಕೆ ಕಂದಾಯ ಹಾಕಿದ್ದಾರೆ, ಮದ್ರಾಸಿನಲ್ಲೂ ಸ್ವಲ್ಪ ಹೆಚ್ಚು ಕಡಿಮೆ ಅದೇ ಧರವಿದೆ. ನಾವು ಇಂಡಿಯಾ ದೇಶದಲ್ಲಿ ಬೆಳೆಯುವ ಕಾಫಿಯಲ್ಲಿ ಶೇಕಡ 70ರಷ್ಟು ಬೆಳೆಯುತ್ತಿದ್ದೇವೆ. ಅದರಿಂದ ಸುಮಾರು 30 ಕೋಟಿ ರೂಪಾಯಿನಷ್ಟು ಫಾರಿನ್ ಎಕ್ಸ್‌ಛೇಂಜ್ ಅರ್ನ್ ಆಗುವುದರಿಂದ ಕಾಫಿ ಬೆಳೆಗೆ ಸಾಧ್ಯವಾದಷ್ಟು ಪ್ರೋತ್ಸಾಹ ಕೊಟ್ಟು ಮೈಸೂರಿನ ಕೀರ್ತಿಯನ್ನುಳಿಸಬೇಕು, ಅಕ್ಕಪಕ್ಕದ ಪ್ರಾಂತ್ಯಗಳಲ್ಲಿರುವ ಧರಕ್ಕಿಂತ ಹೆಚ್ಚು ಹಾಕುವುದು ಒಳ್ಳೆಯದಲ್ಲ ಎಂದು, ಅದರಲ್ಲೂ ಕಮ್ಯುನಿಸ್ಟ್ ದೇಶವಾದ ಕೇರಳಾದಲ್ಲಿರುವ ಧರಕ್ಕಿಂತ ಹೆಚ್ಚು ಹಾಕುವುದು ಒಳ್ಳೆಯದಲ್ಲ ಎಂದು ಕಾಫಿ ತೋಟದ ಕಂದಾಯವನ್ನು ಶೇಕಡ

ಒಂದಕ್ಕೆ ಇಳಿಸಿದ್ದೇವೆ. ಕಾಫಿ ಎರಡೂವರೆ ಲಕ್ಷ ಎಕರೆಯಲ್ಲಿ ಬೆಳೆಯಬೇಕಾಗುತ್ತದೆ. 5 ಸಾವಿರ ಎಕರೆ ರಬ್ಬರ್ ತೋಟವಿದೆ, 10 ಸಾವಿರ ಎಕರೆ ಏಲಕ್ಕಿ ಬೆಳೆ ಇದೆ. ಕಾಫಿಗೆ ಒಂದು ಪರ್ಸೆಂಟ್ ಹಾಕಿದರೂ ಈಗ ಕೊಡುವುದಕ್ಕಿಂತ ಜಾಸ್ತಿಯಾಗಿ 12 ರೂಪಾಯಿ ಕೊಡಬೇಕಾಗುತ್ತದೆ. ಪ್ಲಾಂಟೇಷನ್ ಕಂದಾಯವನ್ನು ಶೇಕಡ ಒಂದಕ್ಕೆ ಇಳಿಸಿದ್ದೇವೆ. ವೆಟ್‌ಲ್ಯಾಂಡನ್ನು ಪೂರ್ಣವಾಗಿ ಡ್ರೈ ಲ್ಯಾಂಡ್ ಎಂದು ಭಾವಿಸಿ ಖುಷ್ಕಿ ಜಮೀನಿಗಿರುವ ಕಂದಾಯವನ್ನೇ ಅದಕ್ಕೂ ಹಾಕಬೇಕು ಎಂದು ಗೊತ್ತು ಮಾಡಿದ್ದೇವೆ. ಇಷ್ಟೆಲ್ಲಾ ಮಾಡಿ ಶೇಕಡ ಆರೂಕಾಲರಷ್ಟಿದ್ದುದನ್ನು 4ಕ್ಕೆ ಇಳಿಸಿದ್ದೇವೆ.

ಮೈಸೂರು ದೇಶದಲ್ಲಿ ಶೇಕಡ 90 ಭಾಗ ಖುಷ್ಕಿ ಜಮೀನಿದೆ, 2 ಕೋಟಿ 80 ಲಕ್ಷ ಎಕರೆ ಭೂಮಿ ಸಾಗುವಳಿಯಲ್ಲಿದೆ, ಅದರಲ್ಲಿ ಸುಮಾರು 2 ಕೋಟಿ 55 ಲಕ್ಷ ಎಕರೆ ಖುಷ್ಕಿ ಇದೆ, ಆದುದರಿಂದ ಖುಷ್ಕಿಗೆ ಧರ ಕಡಿಮೆ ಮಾಡಿದ್ದರಿಂದ ಬಡವರಿಗೆ ಅನುಕೂಲವಾಗುತ್ತದೆ. ಸಾಮಾನ್ಯವಾಗಿ ಬಡವರಲ್ಲಿರುವುದು ಖುಷ್ಕಿ ಜಮೀನು, ಮೈದಾನದಲ್ಲಿ ಗದ್ದೆ ಇರುವುದು ಕಡಿಮೆ. ಮಲೆನಾಡಿನಲ್ಲಿ ರೈನ್ ಫೆಡ್ ವೆಟ್ ಲ್ಯಾಂಡಿಗೆ ನೀರಾವರಿ ಜಮೀನಿನ ಧರ ಬೀಳುತ್ತದೆ. ಹಿಂದೆ ವಾಟರ್ ರೇಟ್ ಬಿಟ್ಟು ಖುಷ್ಕಿ, ತರಿ ಮತ್ತು ಬಾಗಾಯ್ತಿನಿಂದ 3 ಕೋಟಿ 5 ಲಕ್ಷ ರೂಪಾಯಿ ಕಂದಾಯದ ರೂಪದಲ್ಲಿ ಬರುತ್ತಿತ್ತು. ಈಗ ಹೊಸ ಧರದ ಪ್ರಕಾರ 4 ಕೋಟಿ 44 ಲಕ್ಷ ರೂಪಾಯಿ ಬರಬಹುದು. ಅಂದರೆ ಸುಮಾರು ಒಂದು ಕೋಟಿ 40 ಲಕ್ಷ ರೂಪಾಯಿ ಏರಿಸಿದಂತಾಗುತ್ತದೆ. ಬಹುಶಃ ಇದರಿಂದ ಶೇಕಡ 40ರಷ್ಟು ಬರಬಹುದು, ಸಂಬಂಧಪಟ್ಟ ಮಸೂದೆ ಬಂದಾಗ ವಿವರ ಗೊತ್ತಾಗುತ್ತದೆ. ಇದರ ಮೂಲೋದ್ದೇಶ ರೈತರ ಮೇಲೆ ಹೆಚ್ಚು ಬೀಳಬಾರದು, ಅದರಲ್ಲೂ ಬಡವರಿಗೆ ಹೆಚ್ಚು ಅನುಕೂಲವಾಗಬೇಕು, ಖುಷ್ಕಿ ಜಮೀನಿನವರಿಗೆ ಅನಾನುಕೂಲವಾಗಬಾರದು ಎಂಬುದು.

ಪ್ಲಾಂಟೇಷನ್ ಇದ್ದರೂ ಅನೇಕರು ಪ್ಲಾಂಟ್ ಮಾಡುತ್ತಿಲ್ಲ. ಬಡವರು ಜಮೀನು ಪ್ಲಾಂಟೇಷನ್ ಮಾಡಲು ತೆಗೆದುಕೊಂಡು ಮರ ಕಡಿದು ಜಮೀನನ್ನು ಹಾಗೆಯೇ ಬಿಟ್ಟಿದ್ದಾರೆ. ಪ್ಲಾಂಟೇಷನ್ ಮಾಡುವುದು ಕಷ್ಟಕರ, 6–7 ವರ್ಷಗಳವರೆಗೆ ಕೈಗೇನೂ ಸಿಕ್ಕುವುದಿಲ್ಲ, ಲಕ್ಷಾಂತರ ರೂಪಾಯಿ ಖರ್ಚು ಮಾಡಿ ಬೆಳೆಸಬೇಕು. ಹಾಗಿರುವಾಗ ಕಷ್ಟಪಟ್ಟವರಿಗೆ ಸಹಾಯ ಮಾಡದಿದ್ದರೆ ಕಷ್ಟವಾಗುತ್ತದೆ. ಇತರ ಸಂಸ್ಥಾನಗಳಲ್ಲಿ, ಅಕ್ಕಪಕ್ಕದ ಪ್ರಾಂತ್ಯಗಳಲ್ಲಿ ತೋರಿಸುತ್ತಿರುವ ರಿಯಾಯಿತಿಯಾದರೂ ಕೂಡ ತೋರಿಸದಿದ್ದರೆ ಅನ್ಯಾಯವಾಗುತ್ತದೆ, ಎಂದು ಆ ರೀತಿ ತೋರಿಸಿದ್ದೇವೆ. ಮುಖ್ಯವಾಗಿ ಲ್ಯಾಂಡ್ ರೆವೆನ್ಯೂ ಆಕ್ಟ್ ತಿದ್ದುಪಡಿಯಲ್ಲಿರುವುದು ಶೇಕಡ ಆರೂಕಾಲಿನಿಂದ ನಾಲ್ಕಕ್ಕೆ ಇಳಿಸುವುದು, ಪ್ಲಾಂಟೇಷನ್‌ಗೆ ಒಂದು ಪರ್ಸೆಂಟ್ ಮಾಡಿರುವುದು. ಇನ್ನೊಂದು ತಿದ್ದುಪಡಿ ಹಿಂದಿನಂತೆ ಈ ಮಸೂದೆ ಅಂಗೀಕಾರವಾದನಂತರ ಮೂರನೆಯ ವರ್ಷ ಜಾರಿಗೆ ತರಬೇಕು, ಕಾರಣಾಂತರದಿಂದ ಸೆಟಲ್‌ಮೆಂಟ್ ರಿಪೋರ್ಟ್ಸ್ ಕನ್‌ಸಿಡರೇಷನ್ ನಾವು ಎಣಿಸಿದ್ದಕ್ಕಿಂತ ಹೆಚ್ಚು ಕಾಲ ತೆಗೆದುಕೊಂಡಿರುವುದರಿಂದ ಕಂದಾಯ ಹೆಚ್ಚಿಸುವುದಕ್ಕೆ ನಿಧಾನವಾಗುತ್ತದೆ, ಶಾಸನ ಸಭೆಗಳಲ್ಲಿ ಪಾಸಾಗಿ ರಾಜ್ಯಪಾಲರ ಒಪ್ಪಿಗೆ ದೊರೆತು ಡೀಟೈಲ್ಸ್ ವರ್ಕೌಟ್ ಮಾಡಿ ಜಾರಿಗೆ ತರುವ ವೇಳೆಗೆ ಜುಲೈ ತಿಂಗಳು ಕಳೆದುಹೋದರೆ ಇನ್ನೊಂದು ವರ್ಷ ಕಾಯಬೇಕಾಗುತ್ತದೆ ಎಂದು ಯೋಚಿಸಿ

ಯಾವ ವರ್ಷ ಪಾಸಾಗುತ್ತದೆಯೋ ಆ ವರ್ಷವೇ ಜಾರಿಗೆ ತರಬೇಕೆಂದು ಗೊತ್ತು ಮಾಡಿದ್ದೇವೆ. ಈಗಾಗಲೇ ವಸೂಲಿ ನಡೆಯುತ್ತಿದೆ, ಬರುವ ವರ್ಷ ಅಂದರೆ ಜುಲೈನಿಂದ ಪುನರ್ವಿಮರ್ಶಿತ ದರವನ್ನು ಜಾರಿಗೆ ತರಬೇಕು ಎಂದು ಉದ್ದೇಶಿಸಲಾಗಿದೆ. ಇದಕ್ಕಾಗಿ ತಿದ್ದುಪಡಿ ಮಸೂದೆಯನ್ನು ತಂದಿದ್ದೇವೆ. ಮಾನ್ಯ ಸದಸ್ಯರು ಇದಕ್ಕೆ ತಮ್ಮ ಒಪ್ಪಿಗೆ ಕೊಡಬೇಕೆಂದು ಪ್ರಾರ್ಥನೆ ಮಾಡುತ್ತೇನೆ.

**ಶ್ರೀ ಜೆ.ಬಿ. ಮಲ್ಲಾರಾಧ್ಯ (ವಿಧಾನ ಸಭಾಕ್ಷೇತ್ರ):** ಮಲ್ಬರಿ ವಿಷಯ ಹೇಳಲಿಲ್ಲ.

**ಶ್ರೀ ಎಂ.ವಿ. ಕೃಷ್ಣಪ್ಪ:** ಮುಂದೆ ರೆಸಲ್ಯೂಷನ್ ಬಂದಾಗ ಹೇಳಬಹುದು, ಮಲ್ಬರಿಯನ್ನು ಖುಷ್ಕಿ ಎಂದು ಟ್ರೀಟ್ ಮಾಡುತ್ತೇವೆ; ರೈನ್ ಫೆಡ್ ಲ್ಯಾಂಡಿರುವುದನ್ನು ಖುಷ್ಕಿ ಎಂದು ಭಾವಿಸಿ ಖುಷ್ಕಿ ಕಂದಾಯ ಹಾಕುತ್ತೇವೆ. ಇರಿಗೇಟ್ ಆಗುವ ಕಡೆ ಖುಷ್ಕಿ ದರ ಮತ್ತು ವಾಟರ್ ರೇಟ್ ಹಾಕಲಾಗುತ್ತದೆ. ಅದರಲ್ಲಿ ಮೊಟಸ್ಥಳ ಪಟಸ್ಥಳ ಎಂದಿದೆ, ಗಾರ್ಡನ್ನಿಗೆ ಖುಷ್ಕಿ ದರದ ಜೊತೆಗೆ ವಾಟರ್‌ರೇಟ್ ಹಾಕುತ್ತೇವೆ, ಮೊಟಸ್ಥಳಕ್ಕೆ ಬಾವಿಯಿಂದ ಇರಿಗೇಟ್ ಮಾಡುವುದಕ್ಕೆ ಸ್ವಂತ ಖರ್ಚಿನಿಂದ ಬಾವಿ ತೆಗೆದಿದ್ದರೆ ಟ್ಯಾಕ್ಸ್ ಹಾಕುವುದಿಲ್ಲ ಅಂಥ ಜಮೀನನ್ನು ಇನ್ನೊಂದು ಸಲ ಸೆಟಲ್‌ಮೆಂಟ್ ಆಗುವಾಗ ಗಾರ್ಡನ್ ಎಂದು ಟ್ರೀಟ್ ಮಾಡುತ್ತಾರೆ. 30 ವರ್ಷ ಬಾವಿಯ ನೀರಿನ ಸಹಾಯದಿಂದ ಏನು ಬೆಳೆದರೂ ಅಂಥವರೂ ಏನು ಕೊಡಬೇಕಾಗಿಲ್ಲ. 30 ವರ್ಷಗಳಾದ ಮೇಲೆ ಅಂಥ ಬಾವಿ ತೆಗೆದು ಬೆಳೆಮಾಡುವ ಜಮೀನಿಗೆ ಒಳ್ಳೆ ಬೆಲೆ ಬರುವುದರಿಂದ ಶೇಕಡ ನಾಲ್ಕರಂತೆ ಕಂದಾಯ ಕೊಡಬೇಕಾಗುತ್ತದೆ.

**ಶ್ರೀ ಆರ್.ಎಸ್. ಮಹಂತಶೆಟ್ಟಿ (ಸ್ಥಾನೀಯ ಪ್ರಾಧಿಕಾರೀ ಕ್ಷೇತ್ರ):** ತಾವು ಇದರಲ್ಲಿ ಶೇಕಡಾ ಆರರಷ್ಟು ಎಂದು ಇದ್ದುದನ್ನು ಶೇಕಡಾ ನಾಲ್ಕರಷ್ಟಕ್ಕೆ ಇಳಿಸಿದೆ ಎಂದು ಹೇಳುತ್ತಿದ್ದೀರಿ. ಇದಕ್ಕೆ ಯಾವತ್ತಿನ ಬೆಲೆಗಳ ಆಧಾರವನ್ನು ನೋಡಿಕೊಂಡು ಮಾಡುತ್ತಿದ್ದೀರಿ? ಯಾವ ತರಹದಲ್ಲಿ ನಿಗದಿ ಮಾಡುತ್ತಿದ್ದೀರಿ? ಏಕೆಂದರೆ ಕೆಲವು ವೇಳೆ ದರಗಳು 20 ಇರುತ್ತೆ, 50 ಆಗುತ್ತೆ ಅಥವಾ 40 ಆಗುತ್ತೆ. ಹೀಗಿರುವಾಗ ಶೇಕಡಾ ನಾಲ್ಕರಷ್ಟು ಎಂದು ನಿಗದಿ ಮಾಡಲು ಯಾವ ಆಧಾರ ಇಟ್ಟುಕೊಂಡು ಮಾಡುತ್ತಿದ್ದೀರಿ ಎನ್ನುವುದರ ಕ್ಲಾರಿಫಿಕೇಷನ್ನು ಸ್ವಲ್ಪ ಕೊಡಬೇಕು.

**ಶ್ರೀ ಎಂ.ವಿ. ಕೃಷ್ಣಪ್ಪ:** ತಾವು ಸೆಟಲ್‌ಮೆಂಟು ರಿಪೋರ್ಟನ್ನು ಓದಿಲ್ಲ ಎಂದು ಕಾಣುತ್ತದೆ. ಆ ರಿಪೋರ್ಟಿನಲ್ಲಿ ಹೇಳಿರುವಂತೆ ಈಗ್ಗೆ ಸುಮಾರು ಐದು ವರ್ಷಗಳ ಹಿಂದಿನ ಬೆಲೆಗಳನ್ನು ಗಣನೆಗೆ ತೆಗೆದುಕೊಂಡು ಅದರ ಮೇಲೆ ರಿವಿಜನ್ನು ಸೆಟಲ್‌ಮೆಂಟ್ ಮಾಡಬೇಕು ಎಂದು ಹೇಳಿದ್ದಾರೆ ಎಂದರೆ ಸುಮಾರು 1954ನೇ ಇಸವಿಯಿಂದ 1958 ರವರೆಗೆ ಇದ್ದ ರೇಟುಗಳನ್ನು ತೆಗೆದುಕೊಂಡು, ಕ್ರಾಪ್‌ಯೀಲ್ಡ್ ಇವುಗಳ ಮೇಲೆ ನಿಗದಿ ಮಾಡಬೇಕೆಂದು ಸೂಚನೆ ಕೊಟ್ಟಿದ್ದಾರೆ. ಈಗಿನ ಬೆಲೆಗಳನ್ನು ತೆಗೆದುಕೊಂಡಿದ್ದರೆ ರೈತರು ಹಾಳಾಗಿ ಹೋಗುತ್ತಿದ್ದರು. ಅದಕ್ಕಾಗಿ ಇದರಲ್ಲಿ ಹಿಂದೆ ಐದು ವರ್ಷಗಳ ಕೆಳಗೆ ಇದ್ದ ರೇಟುಗಳನ್ನು ಮಾತ್ರ ತೆಗೆದುಕೊಂಡಿದ್ದಾರೆ.

**ಶ್ರೀ ಆರ್.ಎಸ್. ಮಹಂತಶೆಟ್ಟಿ:** ತಾವು ಹಿಂದೆ ಇದ್ದ ಐದು ವರ್ಷಗಳ ರೇಟನ್ನು ತೆಗೆದುಕೊಳ್ಳುವುದಕ್ಕೆ ಬದಲಾಗಿ ಅದಕ್ಕೂ ಹಿಂದೆ ಇದ್ದ ಪೀರಿಯಡ್ಡನ್ನು ಲೆಕ್ಕಕ್ಕೆ ತೆಗೆದುಕೊಂಡಿದ್ದರೆ ಸರಿಯಾಗುತ್ತಿತ್ತು, ಪೀರಿಯಡ್ಡು ತಾವು ಲೆಕ್ಕ ಮಾಡಿರುವುದು ತುಂಬಾ ಷಾರ್ಟು ಪೀರಿಯಡ್ಡು ಆಗುವುದಿಲ್ಲವೆ! ಹಿಂದೆ ಜೋಳ ಹತ್ತು ಅಥವಾ ಎಂಟು ರೂಪಾಯಿಗಳು ಇದ್ದದ್ದು ಈಗ 80 ರೂಪಾಯಿಗಳಷ್ಟು ಏರಿ ಹೋಗಿದೆ. ಅದರಿಂದ ಈಗಿರುವ ಪೀರಿಯಡ್ ಷಾರ್ಟ್ ಆಗಿರುವುದರಿಂದ ಇದನ್ನು ಹೆಚ್ಚು ಮಾಡುವುದು ಸರಿಯಲ್ಲವೇ ಎನ್ನುವುದನ್ನು ವಿಚಾರ ಮಾಡುತ್ತೀರಾ?

**ಶ್ರೀ ಎಂ.ವಿ. ಕೃಷ್ಣಪ್ಪ:** ತಾವು ಸರಿಯಾಗಿ ರಿಪೋರ್ಟನ್ನೇ ಓದಿಲ್ಲ. ಜಾಸ್ತಿ ಮಾಡಬೇಕೇ ಕಡಿಮೆ ಮಾಡಬೇಕೇ ಎನ್ನುವುದಕ್ಕೆ ಈ ವರ್ಷ ಅಥವಾ ಹೋದ ವರ್ಷದ ಬೆಲೆಗಳನ್ನು ಲೆಕ್ಕಕ್ಕೆ ತೆಗೆದುಕೊಂಡಿದ್ದಾರೆ ಆಗ ಬಹಳ ಹೆಚ್ಚು ಏರಿದ ಬೆಲೆಗಳಿದ್ದವು. ಅದರಿಂದಾಗಿ ರೈತರಿಗೆ ಬಹಳ ತೊಂದರೆಗಳಾಗುತ್ತಿದ್ದವು. ಆದುದರಿಂದ 54–55ರಲ್ಲಿದ್ದ ಬೆಲೆಗಳನ್ನು ಲೆಕ್ಕಕ್ಕೆ ತೆಗೆದುಕೊಂಡು ಇದರಲ್ಲಿ ಮಾಡಲಾಗಿದೆ. ಇದರಿಂದೇನೂ ತೊಂದರೆಯಾಗುವುದಿಲ್ಲ.

* * * * *

# ವಿಧಾನ ಪರಿಷತ್ತಿನಲ್ಲಿ ಬೇಡಿಕೆ ಮೇಲಿನ ಚರ್ಚೆ

## 1965

**ಕಂದಾಯ ಸಚಿವರಾಗಿ ಶ್ರೀ ಎಂ.ವಿ. ಕೃಷ್ಣಪ್ಪ ಅವರು ಬೇಸಾಯ ಮಾಡುವವರ ಮೂಲಕ ಹೆಚ್ಚಿನ ಕಂದಾಯವನ್ನು ಪಡೆಯುವುದಕ್ಕೆ ಸಂಬಂಧಿಸಿದಂತೆ ಮೇಲ್ಮನೆಯಲ್ಲಿ ಬೇಡಿಕೆಯ ಚರ್ಚೆ:**

**ಶ್ರೀ ಎಂ.ವಿ. ಕೃಷ್ಣಪ್ಪ (ಕಂದಾಯ ಸಚಿವರು):** ಮಾನ್ಯ ಅಧ್ಯಕ್ಷರೇ, ಕಂದಾಯದ ವಿಷಯದ ಬಗ್ಗೆ ಕೆಲವು ಬಾರಿ ಚರ್ಚೆಯಾಗಿದೆ. ರೆವಿನ್ಯೂ ಆ್ಯಕ್ಟ್ ತಿದ್ದುಪಡಿ ಮಾಡಿದಾಗ ಚರ್ಚೆಯಾಗಿದೆ. ಈ ಮಾನ್ಯ ಸಭೆಯಲ್ಲಿ ನಡೆದ ಅನೇಕ ವಿಚಾರ ಪೂರಿತವಾದ ಟೀಕೆಗಳಿಗೆ ಅನುಭವಸ್ಥರಾದ ಸದಸ್ಯರು ಉತ್ತರ ಕೊಟ್ಟಿದ್ದಾರೆ ಕಂದಾಯ ಹಾಕುವ ಚರಿತ್ರೆಯಲ್ಲಿಯೇ ಶಾಸ್ತ್ರೀಯವಾದ ರೀತಿಯಲ್ಲಿ ಕಂದಾಯ ಹಾಕುವುದಕ್ಕೆ ಪ್ರಯತ್ನಪಟ್ಟಿರುವುದು ಇದೇ ಮೊದಲನೇ ಸಲ ಎಂದು ಹೇಳುತ್ತೇನೆ. ಶ್ರೀಮಾನ್ ಮಲ್ಲಾರಾಧ್ಯರು ಹೇಳಿದ ಹಾಗೆ "ಯಾವ ರೀತಿ ಮಾಡಿದರೂ ಕೂಡ ಸ್ವಲ್ಪ ಲೋಪದೋಶಗಳು ಇದ್ದೇ ಇರುತ್ತವೆ ಅಷ್ಟನ್ನೂ ಪೂರ್ತಿಯಾಗಿ ಸರಿಯಾಗಿ ಮಾಡುತ್ತೇವೆಂದು ಹೇಳುವುದಕ್ಕಾಗುವುದಿಲ್ಲ. ಭೂಮಿಯ ಗುಣದಲ್ಲಿ ವ್ಯತ್ಯಾಸವಿದೆ, ಹವಾಗುಣದಲ್ಲಿ ವ್ಯತ್ಯಾಸವಿದೆ. ಮಳೆ ಬೀಳುವುದರಲ್ಲಿ ವ್ಯತ್ಯಾಸವಿದೆ. ಒಂದೇ ಹೊಲದಲ್ಲಿ ಅಣ್ಣ–ತಮ್ಮಂದಿರು ಭಾಗ ಮಾಡಿಕೊಂಡಿರುವ ಕಡೆ ಅಣ್ಣನಿಗೆ ಒಳ್ಳೆಯ ಭೂಮಿ ಬಂದಿರುತ್ತದೆ, ತಮ್ಮನಿಗೆ ಬೀಳು ಭೂಮಿ ಬಂದಿರುತ್ತದೆ. ಪಸಲಿನಲ್ಲಿ ವ್ಯತ್ಯಾಸವಿರುತ್ತದೆ. ಸರ್ಕಾರ ಕೊಟ್ಟ ಆದೇಶದಂತೆ ಅಧಿಕಾರಿಗಳು 7–8 ವರ್ಷ ಕಷ್ಟಪಟ್ಟು ವರದಿಯನ್ನು ತಯಾರು ಮಾಡಿದ್ದಾರೆ. ಅದನ್ನು ಸಭೆಯ ಮುಂದೆ ತರಲಾಗಿದೆ. ಮೊದಲನೇಯ ಸಲ ಶಾಸ್ತ್ರೀಯವಾದ ರೀತಿಯಲ್ಲಿ ಕಂದಾಯ ಹಾಕುವುದಕ್ಕೆ ಪ್ರಯತ್ನ ಪಟ್ಟಿದ್ದೇವೆ ಇದಕ್ಕಾಗಿ ಎಲ್ಲಾ ಅಧಿಕಾರಿಗಳು ಶ್ರಮಿಸಿದ್ದಾರೆ.

ವಿರೋಧ ಪಕ್ಷದವರು ಹೇಳುತ್ತಿರುವಷ್ಟು ಬೇಜಾರು ರೈತರಿಗೆ ಕಂದಾಯ ಕೊಡುವುದರಲ್ಲಿ ಇಲ್ಲ. ಸರ್ಕಾರ ಹೆಚ್ಚಾಗಿ ಅವರ ಅಭಿವೃದ್ಧಿಗೋಸ್ಕರ ಬಾವಿಗಳಿಗೆ ಮತ್ತು ಪಂಪ್‌ಸೆಟುಗಳಿಗೆ ಸಾಲ ಕೊಡುತ್ತಿದೆ, ಕೆರೆಗಳನ್ನು ಕಟ್ಟಿಸುತ್ತಿದೆ ಮತ್ತು ಇತರ ಸೌಕರ್ಯಗಳನ್ನು ಒದಗಿಸಿ ಕೊಡುತ್ತಿದೆ ಎನ್ನುವುದು ರೈತರಿಗೆ ಗೊತ್ತಾಗಿದೆ. ಬೆಂಗಳೂರಿನ ಸುತ್ತ–ಮುತ್ತ ದೇವನಹಳ್ಳಿ, ಗೌರಿಬಿದನೂರು, ಚಿಕ್ಕಬಳ್ಳಾಪುರ, ಶಿಡ್ಲಘಟ್ಟ ತಾಲ್ಲೂಕುಗಳಲ್ಲಿ ಎರಡು ಸಾವಿರ ಮೂರು ಸಾವಿರ ಪಂಪ್‌ಸೆಟ್‌ಗಳನ್ನು ಹಾಕಿಕೊಂಡು ತರಕಾರಿ ಮುಂತಾದವುಗಳನ್ನು ಬೆಳೆದುಕೊಂಡು ಸುಖವಾಗಿದ್ದಾರೆ. ಅವರ ಅಭಿವೃದ್ಧಿಗಾಗಿಯೇ ರೈತರು ಕಂದಾಯವನ್ನು ಕೊಡಬೇಕಾಗಿದೆ. ಕಂದಾಯವನ್ನು ಮಾಫಿ ಮಾಡಿ ಅವರಲ್ಲಿಯೇ ಬಿಟ್ಟರೆ ಅದರಿಂದ ಅವರು ಏನು ಕೆಲಸಗಳನ್ನು ಮಾಡುವುದಕ್ಕಾಗುವುದಿಲ್ಲ ಸರ್ಕಾರ ಆ ಜವಾಬ್ದಾರಿಯನ್ನು ಹೊತ್ತುಕೊಂಡು ತಾಯಿಯ ಹಾಗೆ ಜವಾಬ್ದಾರಿಯನ್ನು ಹೊತ್ತುಕೊಂಡು ಬೆಳೆಯುವ ಮಗುವನ್ನು ದಂಡಿಸಿ ಅಭಿವೃದ್ಧಿಗೆ ತರುವ ಹಾಗೆ ರೈತರನ್ನೂ ಉತ್ತಮ ಸ್ಥಿತಿಗೆ ತರುವ

ಪ್ರಯತ್ನ ಮಾಡಬೇಕಾಗಿದೆ. ಅವರು ಅಭಿವೃದ್ಧಿಯಾಗಬೇಕಾದರೆ ಸ್ವಲ್ಪ ತೊಂದರೆಯಾದರೂ ಪರವಾಗಿಲ್ಲ. ಹಣ ವಸೂಲು ಮಾಡಿ ಕೆರೆ ಕಟ್ಟಿಸಿಕೊಟ್ಟು, ಪಂಪುಸೆಟ್ ಕೊಟ್ಟು, ರಸ್ತೆಗಳನ್ನು ಅಭಿವೃದ್ಧಿ ಮಾಡಬೇಕಾದುದು ನಮ್ಮ ಕರ್ತವ್ಯ ರೈತರ ಮಕ್ಕಳನ್ನು ಚೆನ್ನಾಗಿ ತಯಾರು ಮಾಡಬೇಕಾದರೆ ಅವರಿಗೆ ಹಣ ಬೇಕು ಅವರ ವಿಷಯದಲ್ಲಿ ನಮಗೆ ಕರುಣೆ ಇಲ್ಲ ಎಂದಲ್ಲ. ರೈತನ ಅಭಿವೃದ್ಧಿಗೆ ಬೇರೆ ಮಾರ್ಗವಿದೆ. 4 ರೂಪಾಯಿಗಳ ಕಂದಾಯ ಬಿಟ್ಟ ಮಾತ್ರಕ್ಕೆ ಅವನ ಅಭಿವೃದ್ಧಿಯಾಗುವುದಿಲ್ಲವೆಂದು ತೋರುತ್ತದೆ. ಒಟ್ಟಿನಲ್ಲಿ ಒಂದು ಭಯವಿತ್ತು ಒಂದಕ್ಕೆ ಎರಡರಷ್ಟು ಕಂದಾಯ ಕೊಡುವುದಕ್ಕೆ ಈಗಾಗಲೆ ಜನರು ತಯಾರಾಗಿದ್ದಾರೆ. ದೇಶಕ್ಕೆ ಆಪತ್ತು ಬಂದಾಗ ಸರ್‌ಚಾರ್ಜು ಹಣ ಬೇಕಾಗಿತ್ತು. ಕೇಂದ್ರ ಸರ್ಕಾರದಿಂದ ಗ್ರಾಂಟು ಬರುತ್ತಿತ್ತು. ಆದರೆ ಅವರು ಅದನ್ನು ಈಗ ಕೊಡುವ ಸ್ಥಿತಿಯಲ್ಲಿಲ್ಲ. ಯುದ್ಧಕ್ಕೋಸ್ಕರ ಕೋಟ್ಯಾಂತರ ರೂಪಾಯಿ ಖರ್ಚು ಮಾಡಬೇಕಾಗಿದೆ. ಅಂದು ಸರ್ಕಾರದವರು ಸರ್‌ಚಾರ್ಜು ಕೊಡಿ ಎಂದು ಕೇಳಿದಾಗ ರೈತರು ಕೊಡುವುದಕ್ಕೆ ಒಪ್ಪಿಕೊಂಡರು. ಒಂದಕ್ಕೆರಡರಷ್ಟು ಕೊಟ್ಟರು. ಈಗ ಜಾಸ್ತಿ ಮಾಡಬೇಡಿ ಎಂದು ಹೇಳಿದ್ದಾರೆ. ಕಂದಾಯ ಜಾಸ್ತಿಯಾಗುತ್ತದೆ ಎಂದರೆ ಜನಗಳಲ್ಲಿ ಸಾಮಾನ್ಯವಾಗಿ ಭಯ ಬರುತ್ತದೆ. ಆದರೆ ಕಂದಾಯವೇನೋ ಜಾಸ್ತಿಯಾಗುವುದಿಲ್ಲ. ವಾಟರ್ ರೇಟ್‌ನಿಂದ ಇರ್ರಿಗೇಷನ್ ಆಕ್ಟ್ ಪ್ರಕಾರ ಕೋಟ್ಯಾಂತರ ರೂಪಾಯಿಗಳ ವರಮಾನ ಬರುತ್ತಿತ್ತು. ಈಗ ವಾಟರ್‌ರೇಟ್ ಮತ್ತು ಕಂದಾಯ ಎಲ್ಲಾ ಒಟ್ಟು ಸೇರಿದರೆ 5 ಕೋಟಿ ರೂಪಾಯಿಗಳ ಉತ್ಪತ್ತಿಯಾಗುತ್ತದೆ. 10 ಕೋಟಿ ರೂಪಾಯಿಗಳನ್ನು ಬೇಕಾದರೆ ಉತ್ಪತ್ತಿ ಮಾಡಿಕೊಳ್ಳಿ, ಸರ್‌ಚಾರ್ಜು ಹಾಕಿಕೊಂಡು ಹೋಗಿ ಕಂದಾಯ ಜಾಸ್ತಿ ಮಾಡಬೇಡಿ ಎಂಬುದೇ ವಾದವಿತ್ತು. ಇದು ಹೆಚ್ಚು ಆಗಬಹುದೆಂಬುದು ಭಯ. ಈ ಭಯವನ್ನು ಮುಖ್ಯಮಂತ್ರಿಗಳು ನಿವಾರಣೆ ಮಾಡಿಕೊಟ್ಟಿದ್ದಾರೆ. ರಿವಿಷನ್ ಆಫ್ ಸೆಟಲ್‌ಮೆಂಟಿನಿಂದ ಕಂದಾಯ ಬರುತ್ತಾ ಇರುವುದು 1 ಕೋಟಿ 32 ಲಕ್ಷ. ಇದರ ಜೊತೆಗೆ ವಾಟರ್‌ರೇಟ್ ಮತ್ತು ಸರ್‌ಚಾರ್ಜು ಎರಡೂ ಸೇರಿದರೆ 5 ಕೋಟಿ ರೂಪಾಯಿಗಳಾಗಬಹುದು. ಮದ್ರಾಸಿನಲ್ಲಿನ ಯಾವ ವಾಟರ್‌ರೇಟ್ ಇದೆಯೋ ಅದನ್ನು ನಮ್ಮ ಮೈಸೂರಿಗೂ ಅನ್ವಯಿಸುತ್ತೇವೆಂದು ಮುಖ್ಯಮಂತ್ರಿಗಳು ಈ ಮನೆಯಲ್ಲಿ ಭರವಸೆ ಕೊಟ್ಟಿದ್ದಾರೆ.

ಕಾವೇರಿ ಮೈಸೂರಿನಲ್ಲಿ ಹರಿದು ಮದ್ರಾಸ್ ರಾಜ್ಯಕ್ಕೆ ಹೋಗುವ ಹಾಗೆ ಕೃಷ್ಣಾನದಿ ಹರಿದು ಆಂಧ್ರಕ್ಕೆ ಹೋಗುತ್ತದೆ. ಕೃಷ್ಣಾ ಮತ್ತು ಕಾವೇರಿ ಮೈಸೂರಿನ ಜೀವನದಿಗಳು. ಇನ್ನು ಆಂದ್ರ ಮತ್ತು ಮದ್ರಾಸ್ ವಾಟರ್‌ರೇಟ್ ತೆಗೆದುಕೊಳ್ಳೋಣ. ಕಾವೇರಿ ನದಿಯ ಕೆಳಗೆ ಮೆಟ್ಟೂರ್ ಡ್ಯಾಂ ಕಟ್ಟಿದ್ದಾರೆ. ಮೆಟ್ಟೂರು ಡ್ಯಾಂ ಕೆಳಗಡೆ ಏನು ವಾಟರ್‌ರೇಟ್ ಹಾಕಿದ್ದಾರೋ ಅದನ್ನೇ ಹೆಚ್ಚು ಕಡಿಮೆ ಕನ್ನಂಬಾಡಿ ಕೆಳಗೆ ಇರುವ ಜಮೀನಿಗೂ ಹಾಕೋಣ. ಅಲ್ಲಿ ಏನು ರೇಟ್ ಇದೆಯೋ ಅದನ್ನೇ ಇಲ್ಲಿ ಇಡೋಣ ಕಾವೇರಿ ಮತ್ತು ಕೃಷ್ಣಚಾನಲ್ಸ್ ಕೆಳಗಡೆ ಏನು ರೇಟ್ ಇದೆಯೋ ಅದನ್ನು ಗಣನೆಗೆ ತೆಗೆದುಕೊಂಡು ಸಮಂಜಸವಾದುದನ್ನು ಇಲ್ಲಿಯೂ ಹಾಕಿಕೊಳ್ಳೋಣ.

**ಶ್ರೀ ಕೆ.ಟಿ. ಶಾಮಯ್ಯಗೌಡ:** ಪ್ರಾಜೆಕ್ಟ್ ವೈಜ್ ರೇಟ್ ಹಾಕುತ್ತೀರೋ ಅಥವಾ ಯೂನಿಫಾರಂ ರೇಟ್ ಹಾಕುತ್ತೀರೋ?

**ಶ್ರೀ ಎಂ.ವಿ. ಕೃಷ್ಣಪ್ಪ:** ಇನ್ನೂ ಆ ಬಗ್ಗೆ ವಿವರಗಳು ವರ್ಕ್‌ಪ್ ಆಗಲಿಲ್ಲ. ಮೇಜರ್ ಪ್ರಾಜೆಕ್ಟ್, ಮೀಡಿಯಂ ಪ್ರಾಜೆಕ್ಟ್, ಮೈನರ್ ಪ್ರಾಜೆಕ್ಟ್‌ಗಳಿಗೆ ಬೇರೆ ಬೇರೆ ದರಗಳು ಇರುತ್ತವೆ. ಕನ್ನಂಬಾಡಿ ಮತ್ತು ಮೆಟ್ಟೂರ್ ಡ್ಯಾಂ ಇವೆಲ್ಲಾ ಒಂದು ಲೆವೆಲ್ಲಿನಲ್ಲಿ ಬರುತ್ತದೆ. ಮೀಡಿಯಂ ಪ್ರಾಜೆಕ್ಟ್‌ನಲ್ಲಿ ಮೊರ್ಕೊನಹಳ್ಳಿ, ವಾಣಿವಿಲಾಸ ಸಾಗರ, ಇಂಥದೆಲ್ಲಾ ಬರುತ್ತದೆ. ಮೈನರ್ ಇರಿಗೇಷನ್ ವಿಷಯ ಬೇರೆ. ಕೋಲಾರ ಜಿಲ್ಲೆಯಲ್ಲಿ ಕೊಡುತ್ತಿರುವುದು 5–6 ರೂಪಾಯಿಗಳು. ಇದರಲ್ಲಿ ಕಂದಾಯ ಮತ್ತು ವಾಟರ್‌ರೇಟ್ ಎರಡೂ ಸೇರಿವೆ. ಕೆಲವು ಪ್ರದೇಶಗಳಲ್ಲಿ ಕೆರೆಗಳು ಹೂತುಹೋಗುತ್ತವೆ, 5–6 ವರ್ಷಗಳು ನೀರು ಬರುವುದಿಲ್ಲ. ಇಂತಹ ಪರಿಸ್ಥಿತಿ ಇದೆ. ಮೈನರ್ ಇರಿಗೇಷನ್ ಕೆಳಗೆ 5 ರೂಪಾಯಿಗಳಿಗೆ ಕಡಿಮೆ ಇಲ್ಲದ ಹಾಗೆ ಕಂದಾಯ ಹೆಚ್ಚು ಕಡಿಮೆ ಆಗದ ಹಾಗೆ ನೋಡಿಕೊಳ್ಳುತ್ತೇವೆ. ಮೇಜರ್ ಇರ್ರಿಗೇಷನ್ ಸಂಬಂಧದಲ್ಲಿ ಕನ್ನಂಬಾಡಿಯ ಹತ್ತಿರ ಬಂದು ಬೆಳಿಗ್ಗೆ 15 ರೂಪಾಯಿಗಳನ್ನೂ ಎರಡು ಜಿಲ್ಲೆಗಳಿಗೆ 22 ರೂಪಾಯಿಗಳನ್ನು ಹಾಕಿದ್ದೇವೆ. 25 ರೂಪಾಯಿಗಳ ಮೇಲೆ ಹಾಕುವುದಿಲ್ಲ. ಕಬ್ಬು ಬೆಳೆಯುವವರು ಎರಡು ಬೆಳೆ ಬೆಳೆದರೂ 12 ತಿಂಗಳು ನೀರು ಸರಬರಾಜು ಮಾಡಿದರೂ ಅವರಿಗೆ 25 ರೂಪಾಯಿಗಳ ಮೇಲೆ ಕಂದಾಯ ಹಾಕುವುದಿಲ್ಲ. ಒಟ್ಟಿನಲ್ಲಿ ಎಲ್ಲಾ ಸೇರಿ 5 ಕೋಟಿ ರೂಪಾಯಿ ಬರುತ್ತದೆ. ಮುಂದೆ ಹಾಕುವ ಪ್ರಪೋಜಲ್ಸ್ 5 ಕೋಟಿ ವರಮಾನ ಬರುವ ಹಾಗೆ ನೋಡಿಕೊಳ್ಳುತ್ತೇವೆ. ಅಷ್ಟು ಭರವಸೆಯನ್ನು ಕೊಡುತ್ತೇನೆ.

* * * * *

# ಬರ ಪರಿಹಾರ ಕಾಮಗಾರಿಗಳು
# 1966

ಶ್ರೀ ಎಂ.ವಿ. ಕೃಷ್ಣಪ್ಪನವರು ಕಂದಾಯ ಹಾಗೂ ಪಶುಸಂಗೋಪನ ಸಚಿವರಾದ ನಂತರ ಮೈಸೂರು ರಾಜ್ಯವನ್ನು ಅಭಿವೃದ್ಧಿಗೊಳಿಸುವುದರ ಬಗೆಗೆ ಅನೇಕ ಕಾರ್ಯಯೋಜನೆಗಳನ್ನು ಕೈಗೊಂಡರು. ಆದರೆ 1965–66ರಲ್ಲಿ ರಾಜ್ಯದಲ್ಲಿ ಬರಗಾಲ ತಲೆದೋರಿತು. ಇದಕ್ಕೆ ಪರಿಹಾರಗಳನ್ನು ಸಚಿವರು ಘೋಷಿಸಿದರು. ಬರ 'ಪರಿಹಾರ ಕಾಮಗಾರಿ'ಗಳು ಕೈಗೊಂಡರು.

ಚಿತ್ರದುರ್ಗ ಹಾಗೂ ಕೋಲಾರ ಜಿಲ್ಲೆಗಳು ಕ್ಷಾಮದ ಪರಿಸ್ಥಿತಿ ಎದುರಿಸುತ್ತಿದ್ದವು. ಆಹಾರಧಾನ್ಯಗಳ ಕೊರತೆ, ನಿರುದ್ಯೋಗದ ಸಮಸ್ಯೆ, ನೀರಿನ ಸಮಸ್ಯೆ ಇವೇ ಮುಂತಾದ ಸಮಸ್ಯೆಗಳನ್ನು ಎದುರಿಸುತ್ತಿದ್ದವು. ಚಿತ್ರದುರ್ಗ ಜಿಲ್ಲೆ ಹಿಂದಿನಿಂದಲೂ ತುಂಬಾ ಹಿಂದುಳಿದ ಜಿಲ್ಲೆಯಾದ್ದರಿಂದ ಅದರ ಸರ್ವತೋಮುಖ ಅಭಿವೃದ್ಧಿಗೆ ಶ್ರೀ ಎಂ.ವಿ. ಕೃಷ್ಣಪ್ಪನವರು ಕಂಕಣತೊಟ್ಟರು. ಜಿಲ್ಲೆಯಲ್ಲಿ ಸುಮಾರು 64 ವಿವಿಧ ರೀತಿಯ ಕಾಮಗಾರಿಗಳನ್ನು ಮಾಡಿಸಿದರು. ಬರಪರಿಹಾರ ಕಾರ್ಯಗಳಲ್ಲಿ ಪ್ರಧಾನವಾದ್ದು ಕಾಂಟೂರ್, ಬಂಡಿಂಗ್, ಸಾಯಿಲ್ ಕನ್‌ಸರ್ವೇಷನ್, ಗೋಕಟ್ಟೆ ನಿರ್ಮಾಣ, ಟ್ರೆಂಚುಗಳನ್ನು ಅಗೆಯುವುದು, ಕೆರೆಗಳಲ್ಲಿ ಊಳು ತೆಗೆಯುವುದು, ಫೀಡರ್ ಚಾನಲ್ ಕಾರ್ಯವೇ ಮುಂತಾದ ಕಾರ್ಯಗಳಲ್ಲಿ ಗ್ರಾಮವಾಸಿಗಳು ತೊಡಗಿಸಿಕೊಳ್ಳುವುದರ ಮೂಲಕ ಉದ್ಯೋಗ ನಿರ್ಮಾಣ ಮಾಡಿಕೊಡುತ್ತಿದ್ದರು.

ಚಿತ್ರದುರ್ಗ ಜಿಲ್ಲೆಗೆ ಮಾತ್ರ ಸುಮಾರು 1,56,014 ರೂಪಾಯಿಗಳಷ್ಟು ಖರ್ಚು ಮಾಡಿದರು 1966ನೇ ವರ್ಷದ ಆರಂಭದಲ್ಲಿ.

ಕೋಲಾರ ಜಿಲ್ಲೆಯಲ್ಲೂ ಸಹ ಚಿತ್ರದುರ್ಗ ಜಿಲ್ಲೆಯಲ್ಲಿ ಕೈಗೊಂಡ ಕಾಮಗಾರಿಗಳನ್ನು ಮಾಡಿಸಿದರು. ಕೋಲಾರ ಜಿಲ್ಲೆಗೂ ಸಹ ಸುಮಾರು 6,25,000 ರೂಪಾಯಿಗಳನ್ನು ಮಂಜೂರು ಮಾಡಿದರು. ಸಣ್ಣ ನೀರಾವರಿ ಕಾರ್ಯಗಳನ್ನು ಸಹ ಕೈಗೊಳ್ಳಲಾಯಿತು. ಜಿಲ್ಲೆಯಲ್ಲಿ 400–500 ಬಾವಿಗಳನ್ನು ತೋಡುವುದಕ್ಕೆ, ಪಂಪುಸೆಟ್‌ಗಳನ್ನು ಒದಗಿಸಿಕೊಡುವುದಕ್ಕೆ ಒಟ್ಟು ಸುಮಾರು 40–50 ಲಕ್ಷ ರೂಪಾಯಿಗಳ ಯೋಜನೆ ಕೈಗೊಂಡು ಕಾರ್ಯರೂಪಕ್ಕೆ ತಂದರು. ಈ ರೀತಿಯಲ್ಲಿ ರಾಜ್ಯದ ಎಲ್ಲಾ ಜಿಲ್ಲೆಗಳನ್ನು ಗುರ್ತಿಸಿ ಸಹಾಯ ಹಸ್ತ ನೀಡಿದವರು ಶ್ರೀ ಎಂ.ವಿ.ಕೆ.

* * * * *

# ಭೂ ಕಂದಾಯ ಪದ್ಧತಿ ರದ್ದು

## 1966

ಎಂ.ವಿ. ಕೃಷ್ಣಪ್ಪ ಅವರು ಕಂದಾಯ ಮಂತ್ರಿಗಳಾಗಿ ಅಧಿಕಾರದ ಈ ಅವಧಿಯಲ್ಲಿ ಹಲವಾರು ಸಲ ಕಂದಾಯದಲ್ಲಿ ಮಾರ್ಪಾಡುಗಳನ್ನು ಮಾಡಿದರು. ಆದರೆ ವಿರೋಧ ಪಕ್ಷದವರ ಆಡಳಿತ ಪಕ್ಷದವರ ಅಸಹಕಾರವಿತ್ತು. ಈ ಕಾರಣದಿಂದ ಅಂತಿಮ ದಿನಗಳಲ್ಲಿ ಕ್ಯಾಬಿನೆಟ್‌ನಲ್ಲಿ 'ಸಬ್‌ಕಮಿಟಿ' ರಚಿಸಿ 'ಭೂ ಕಂದಾಯ ರದ್ದು'ಪಡಿಸುವ ಬಗ್ಗೆ ಅಧ್ಯಯನ ಮಾಡಲು ಒಪ್ಪಿಸಿದರು.

ಮೇಲ್ಮನೆಯಲ್ಲಿ ಈ 'ಭೂಕಂದಾಯ ರದ್ದು' ಎಂಬ ವಿಷಯವನ್ನು ಎಲ್ಲಾ ಸದಸ್ಯರಿಗೂ ಎಂ.ವಿ.ಕೆ. ತಿಳಿಸಿದಾಗ ಎಲ್ಲರಿಗೂ ಆಶ್ಚರ್ಯವಾಯ್ತು. ಇದಕ್ಕೆ ಸಂಬಂಧಿಸಿದಂತೆ ಅಲ್ಲಿನ ಚರ್ಚೆಯ ಸಂಕ್ಷಿಪ್ತ ಭಾಗ.

**ಶ್ರೀ ಜೆ.ಬಿ. ಮಲ್ಲಾರಾಧ್ಯ:** ಈ ಭೂಕಂದಾಯವನ್ನು ರದ್ದುಗೊಳಿಸುವುದಕ್ಕೆ ಪ್ರಬಲವಾದ ಕಾರಣಗಳೇನಾದರೂ ಸರ್ಕಾರದ ಮನಸ್ಸಿನಲ್ಲಿದೆಯೆ?

**ಶ್ರೀ ಎಂ.ವಿ. ಕೃಷ್ಣಪ್ಪ:** ರೈತರಿಗೆ ಈ ಕಂದಾಯದ ಹೊರೆ ಬಹಳ ಪುರಾತನ ಕಾಲದಿಂದಲೂ ಬಂದಿದೆ. ರೈತರು ಕಂದಾಯ ಕೊಡುವುದಕ್ಕೆ ಸ್ವಲ್ಪ ವಿರೋಧಿಸುತ್ತಿದ್ದಾರೆ. ದೇಶಧ ಮುಂದೆ ಆಹಾರದ ಸಮಸ್ಯೆ ಬಹಳವಾಗಿದೆ. ಹೆಚ್ಚು ಆಹಾರ ಬೆಳೆಯುವ ರೈತರಿಗೆ ಸಹಾಯ ಮಾಡಬೇಕು ಎನ್ನುವುದು ಒಂದು ಉದ್ದೇಶ. ಇದನ್ನೆಲ್ಲ ಮನಸ್ಸಿನಲ್ಲಿಟ್ಟುಕೊಂಡು ಮಾನ್ಯ ಮುಖ್ಯಮಂತ್ರಿಗಳು ಲ್ಯಾಂಡ್ ರಿವಿಷನ್ ಸೆಟಲ್‌ಮೆಂಟ್ ಏರಿಸುವಾಗ, ಸರ್‌ಚಾರ್ಜು ಹಾಕುವಾಗ, ಇದು ಬಹಳ ಹಿಂದಿನ ಪದ್ಧತಿ, ಇದನ್ನು ಸಾಧ್ಯವಾದಷ್ಟು ಬೇಗ ತೆಗೆದುಹಾಕಿದರೆ ಒಳ್ಳೆಯದೆಂದು. ಆದ್ದರಿಂದ ಕಂದಾಯ ರದ್ದುಗೊಳಿಸುವ ವಿಷಯ ಪರಿಶೀಲನೆಯಲ್ಲಿದೆ.

* * * * *

# ತಿರುಪತಿ ತಿರುಮಲೆಯಲ್ಲಿ ಕೊಠಡಿಗಳ ನಿರ್ಮಾಣ 1966

ಪುಣ್ಯಕ್ಷೇತ್ರವಾದ 'ತಿರುಪತಿ'ಗೆಂದು ಕರ್ನಾಟಕದಿಂದ ಪ್ರತಿದಿನ ನೂರಾರು ಸಂಖ್ಯೆಯಲ್ಲಿ ಹೋಗಿಬರುತ್ತಿದ್ದರು. ಆದರೆ ಸೌಲಭ್ಯಗಳು ತುಂಬಾ ಕಡಿಮೆಯಾಗಿತ್ತು. ಈ ಸಂದರ್ಭದಲ್ಲಿ ಮಾನ್ಯ ಕಂದಾಯ ಮಂತ್ರಿಗಳಾದ ಎಂ.ವಿ. ಕೃಷ್ಣಪ್ಪ ಅವರು ಕರ್ನಾಟಕ ಸರ್ಕಾರದ ಪರವಾಗಿ ತಿರುಪತಿಯಲ್ಲಿ ಅನೇಕ ಸೌಲಭ್ಯಗಳನ್ನು ಮಾಡಿಕೊಟ್ಟರು.

ಮೈಸೂರು ಪ್ರಾಂತ್ಯದಿಂದ ಪ್ರವಾಸ ಹೋಗುತ್ತಿದ್ದ ಪ್ರವಾಸಿಗರಿಗೆ ತಿರುಪತಿಯಲ್ಲಿ ಸುಸಜ್ಜಿತವಾದ 6 ಕೊಠಡಿಗಳನ್ನು ಸರ್ಕಾರ ಅತಿಮುಖ್ಯ ಗಣ್ಯರಿಂದ ಸುಮಾರು 2,37,595 ರೂಗಳನ್ನು ಪಡೆದು ಕಟ್ಟಿಸಿಕೊಟ್ಟಿತು. 2 ಲಕ್ಷ ರೂಪಾಯಿಗಳಲ್ಲಿ ಸುಸಜ್ಜಿತವಾದ ಅತಿಥಿಗೃಹವನ್ನು ಎಂ.ವಿ. ಕೃಷ್ಣಪ್ಪ ಅವರು ಸರ್ಕಾರದ ಪರವಾಗಿ ಕಟ್ಟಿಸಿದರು.

ಶ್ರೀ ಲಾಲ್ ಬಹದ್ದೂರ್ ಶಾಸ್ತ್ರಿಗಳ ಮೂಲಕ 15 ಲಕ್ಷ ರೂಪಾಯಿ ಬೆಲೆ ಬಾಳುವ ಛತ್ರವನ್ನು ಕಟ್ಟಿಸಲು ಅವರ ಮನಸ್ಸನ್ನು ಒಪ್ಪಿಸಿದ್ದು ಎಂ.ವಿ. ಕೃಷ್ಣಪ್ಪ ಅವರು. ಇದರಲ್ಲಿ 102 ರೂಮುಗಳು ಇವೆ.

ಗಣ್ಯರಾದ 20 ಜನರ ಮನಸ್ಸನ್ನು ಒಪ್ಪಿಸಿ ಒಬ್ಬೊಬ್ಬರಿಂದಲೂ ಡೊನೇಷನ್ ಪಡೆದು ಸುಸಜ್ಜಿತ 20 ರೂಮುಗಳನ್ನು ಶ್ರೀಯುತರು ಕಟ್ಟಿಸಿದರು. ಇದನ್ನೆಲ್ಲಾ ನೋಡಿಕೊಳ್ಳಲು ಮೈಸೂರು ಪ್ರಾಂತ್ಯದ ಒಬ್ಬ ಪೇಶ್ಕಾರನನ್ನು ನೇಮಿಸಿದರು.

ಜೊತೆಗೆ ಮಹದೇಶ್ವರ ಬೆಟ್ಟದ ರಸ್ತೆ, ನೀರು, ವಿದ್ಯುತ್, ಕೊಠಡಿಗಳ ವ್ಯವಸ್ಥೆ ಮಾಡಿದವರು ಎಂ.ವಿ. ಕೃಷ್ಣಪ್ಪನವರು ಇದಕ್ಕೆ ಸುಮಾರು 35-40 ಲಕ್ಷ ಖರ್ಚು ಮಾಡಿದರು.

ಹಾಗೆಯೇ ಬಿಳಿಗಿರಿರಂಗನಬೆಟ್ಟ, ಶ್ರವಣಬೆಳಗೊಳ ಬೆಟ್ಟಗಳಲ್ಲೂ ವ್ಯವಸ್ಥೆಗಳನ್ನು ಮಾಡಿಕೊಟ್ಟವರು ಎಂ.ವಿ. ಕೃಷ್ಣಪ್ಪನವರು.

* * * * *

# ಲೋಕಸಭೆಯಲ್ಲಿ ಶ್ರದ್ಧಾಂಜಲಿ

## Monday, August 4, 1980

**Mr. SPEAKER:** SHRI Krishnappa was a member of the First, Second, Fourth, Fifth and Sixth Loksabha from Karnataka during 1952-62 and 1967-79. He had aslo been elected to the third Lokasabha but resigned his seat before taking Oath and was subsequently elected to Mysore Legislative Council and became Minister of Revenue, Food and Animal Husbandry in the Government of Mysore during the years 1962-67.

Earlier he was Deputy Minister of Food and Agriculture in the Central Government during 1952-62

A freedom fighter, he participated in the `Quist India' movement and was imprisioned.

An active Parliamentarian, he took keen interest in parliamentary activities.

An agriculturist, he was appointed Chairman, Agricultural prices enquiry committee in 1953.

A widely travelled person, he had visited many countries. He was leader of delegation which studied the Agricultural Leap-forward in China. He led an Indian delegation to Japan and Norway to study Fisheries in order to encourage their development in India.

He was a Member of the Indian Delegation to the U.N.O. in 1973. A Social Worker, he organised adult Literacy compaign among 'Mining' labour in Mysore.

He evinced keen interest in the development of dairying, fishereis and poultry.

We deeply mourn the loss of this friend and I am sure the House will join me in conveying our condolences to the bereaved family.

The House may stand in silience for a short while to expres its sorrow.

The members then stood in silienc for a short while.

* * * * *

# ವಿಧಾನಸಭೆಯಲ್ಲಿ ಶ್ರದ್ಧಾಂಜಲಿ

**1980 ಆಗಸ್ಟ್ 1ನೇ ತಾರೀಖು ಶ್ರೀ ಎಂ.ವಿ. ಕೃಷ್ಣಪ್ಪ ಅವರು ಹೃದಯಾಘಾತದಿಂದ ದೈವಾಧೀನರಾದರು. 1981 ಜನವರಿ 29ನೇ ತಾರೀಖು ವಿಧಾನ ಸಭೆಯಲ್ಲಿ ಶ್ರದ್ಧಾಂಜಲಿ ಅರ್ಪಿಸಿದರು.**

**Mr. SPEAKER:** Before we commence our business I have a sad duty to perform which is to make a reference to the demise of the following person since the House met lost.

The State is very much poorer by the demise of Sri M.V. Krishnappa on 1st August, 1980. Sri Krishnappa was a Member of the Representative Assembly during 1945-1949 and a Member of the Parliament during 1952-1957. He served as a Member of the Legislative Council between 1962-1968. He was Minister for Revenue Mysore State between 1962-1967.

**ಶ್ರೀ ಆರ್. ಗುಂಡೂರಾವ್ (ಮಾನ್ಯ ಮುಖ್ಯಮಂತ್ರಿಗಳು):** ಶ್ರೀಮಾನ್ ಎಂ.ವಿ. ಕೃಷ್ಣಪ್ಪನವರು ಯುವಕರಾಗಿದ್ದಾಗ ಬಹಳ ಕ್ರಾಂತಿಕಾರಕವಾದ ಮಾರ್ಗವನ್ನು ಅನುಸರಿಸಿ, ಸತ್ಯಾಗ್ರಹದಲ್ಲಿ ಭಾಗವಹಿಸಿ, ವಿದ್ಯಾರ್ಥಿ ನಾಯಕರಾಗಿ, ಯುವಜನ ನಾಯಕರಾಗಿ ಅನೇಕ ಸಾರಿ ಜೈಲುವಾಸವನ್ನು ಅನುಭವಿಸಿದ್ದಾರೆ. ಅದೇ ರೀತಿ ಕ್ವಿಟ್ ಇಂಡಿಯ ಚಳುವಳಿಯಲ್ಲಿ ಸಹ ಅವರು ಭಾಗವಹಿಸಿ – ಈ ದೇಶವನ್ನು ಬಿಟ್ಟು ಪರದೇಶ ಸೇರಿ ಅಲ್ಲೂ ಕೂಡ ಆ ಚಳುವಳಿಯನ್ನು ಅವರು ಏರ್ಪಾಡು ಮಾಡುತ್ತಿದ್ದರು. ಅವರು ಬಹಳ ಚಿಕ್ಕವಯಸ್ಸಿನಲ್ಲೇ ಅಂದರೆ ಕೇವಲ 26 ವರ್ಷದಲ್ಲೆ ಮೈಸೂರಿನ ಪ್ರಜಾಪ್ರತಿನಿಧಿ ಸಭೆಗೆ ಆಯ್ಕೆಯಾಗಿ ಆನಂತರ ಲೋಕಸಭೆಗೂ ಆಯ್ಕೆಯಾಗಿದ್ದರು.

1952ರಲ್ಲಿ ಲೋಕಸಭೆಗೆ ಆಯ್ಕೆಯಾಗಿ ದಿವಂಗತ ಪಂಡಿತ್ ಜವಾಹರಲಾಲ್ ನೆಹರೂ ರವರ ಮಂತ್ರಿಮಂಡಲದಲ್ಲಿ ಕೃಷಿ ಮತ್ತು ಆಹಾರ ಖಾತೆಯ ಮಾನ್ಯ ಮಂತ್ರಿಗಳಾಗಿ ಅನೇಕ ವರ್ಷಗಳ ಕಾಲ ಕೆಲಸ ಮಾಡಿದ್ದರು. ನಮ್ಮ ರಾಜ್ಯದಲ್ಲೂ ಕೂಡ ಅವರು ವಿಧಾನ ಪರಿಷತ್ತಿನ ಸದಸ್ಯರಾಗಿ ರಾಜ್ಯದ ರೆವಿನ್ಯೂ ಮಂತ್ರಿಗಳಾಗಿ 5 ವರ್ಷಗಳ ಕಾಲ ಕೆಲಸ ಮಾಡಿದ್ದರು. ಪುನಃ ಅವರು ಪಾರ್ಲಿಮೆಂಟಿಗೆ ಆಯ್ಕೆಯಾಗಿ ಹೋಗಿದ್ದರು. ಕಳೆದ ಸಾರಿ ಅಂದರೆ 1980ರಲ್ಲಿ ಮಾತ್ರ ಅವರು ಲೋಕಸಭೆಗೆ ಹೋಗುವುದಕ್ಕೆ ಆಗಲಿಲ್ಲ. ಲೋಕಸಭಾ ಸದಸ್ಯರಾಗಿ ಅಲ್ಲಿ ಮತ್ತು ಈ ರಾಜ್ಯದಲ್ಲಿ ಬಹಳ ಸೇವೆ ಸಲ್ಲಿಸಿದಂತವರು ಮತ್ತು ಅವರು ಬಹಳ ಮುಖ್ಯವಾಗಿ ಯುವಕರಿಗೆ ಬಹಳ

ಮಾರ್ಗದರ್ಶನವನ್ನು ನೀಡಿದಂತ ವ್ಯಕ್ತಿ. ಅವರು 1.8.1980ರಂದು ನಿಧನರಾದರು. ಆ ಒಂದು ದುಃಖವನ್ನು ತಡೆದುಕೊಳ್ಳುವುದಕ್ಕೆ ಅವರ ಕುಟುಂಬ ವರ್ಗದವರಿಗೆ ಭಗವಂತನು ಧೈರ್ಯವನ್ನು ಕೊಡಲಿ ಮತ್ತು ಅವರ ಆತ್ಮಕ್ಕೆ ಶಾಂತಿ ಸಿಗಲಿ ಎಂದು ನಾವು ಕೋರುತ್ತೇವೆ.

**ಶ್ರೀ ದೇವರಾಜ ಅರಸ್ (ಮಾನ್ಯ ವಿರೋಧ ಪಕ್ಷದ ನಾಯಕರು):** ಶ್ರೀಮಾನ್ ಎಂ.ವಿ. ಕೃಷ್ಣಪ್ಪನವರು ಇವರು ಕಾಲೇಜ್‌ನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ ಕಾಲದಲ್ಲಿ 'ಕ್ವಿಟ್' ಇಂಡಿಯಾ ಚಳುವಳಿ ಪ್ರಾರಂಭವಾಯ್ತು. ಆಗಿನ ಕಾಲದಲ್ಲಿ ಹಳೆಯ ಮೈಸೂರಿನಲ್ಲಿ ಶ್ರೀಮಾನ್ ಕೃಷ್ಣಪ್ಪನವರ ಹೆಸರನ್ನು ಕೇಳದೇ ಇರುವವರು ಇಲ್ಲ. ಆಗ ಕೃಷ್ಣಪ್ಪನವರು ಎಂದರೆ ಸರ್ಕಾರಕ್ಕೆ ಮತ್ತು ಪೋಲೀಸನವರಿಗೆ ಒಂದು ರೀತಿಯ ಭಯ. ಏತಕ್ಕೆಂದರೆ ಅವರು 'ಈ ದಿನ ಇಲ್ಲಿ ಎಂದರೆ ನಾಳೆ ಇನ್ನೆಲ್ಲೋ' ಇರುತ್ತಿದ್ದರು, ಯಾರಿಗೂ ಗೊತ್ತಾಗುತ್ತಿರಲಿಲ್ಲ. 1942ನೇ ಇಸ್ವಿಯಲ್ಲಿ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಬಹಳ ಸಾಹಸ ಮಾಡಿದಂತ ವ್ಯಕ್ತಿ ಇವರು. ನನಗೆ ಜ್ಞಾಪಕವಿದ್ದ ಹಾಗೆ ಅವರು 1945ರಲ್ಲಿ ಪ್ರಜಾಪ್ರತಿನಿಧೀ ಸಭೆಯ ಸದಸ್ಯರಾಗಿದ್ದರು. ಮತ್ತೆ 1952 ರಿಂದ 1957ರವರೆಗೆ ಲೋಕಸಭೆಯ ಸದಸ್ಯರಾಗಿದ್ದರು. ಮತ್ತು ಕೆಲವಾರು ವರ್ಷಗಳ ಕಾಲ ಅವರು ಮಿನಿಸ್ಟರ್ ಆಗಿ ಕೂಡ ಕೆಲಸ ಮಾಡಿದ್ದರು. ಇಲ್ಲಿ ರೆವಿನ್ಯೂ ಮಿನಿಸ್ಟರ್ ಆಗಿ ಕೆಲಸ ಮಾಡಿದ್ದರು. ಅವರು ಮಾಡಿರತಕ್ಕ ಒಂದು ಸ್ತುತ್ಯಾರ್ಹವಾದ ಕೆಲಸವನ್ನು ನಾವು ಸದಾಕಾಲ ಸ್ಮರಿಸುವ ಹಾಗೆ ಮಾಡಿ ಹೋಗಿದ್ದಾರೆ. ನಮ್ಮ ರಾಜ್ಯದಲ್ಲಿ ಇವತ್ತು ಈ ಒಂದು ಗೋಸಂಪತ್ತನ್ನು ಬೆಳೆಸಿರುವುದೇ ಆಗಲಿ ಕ್ಷೀರಾಭಿವೃದ್ಧಿ ಕೇಂದ್ರಗಳನ್ನು ಮಾಡಿರುವುದೇ ಆಗಲಿ ಮತ್ತು ಈ ಮಿಶ್ರತಳಿ ಅಭಿವೃದ್ಧಿ ಕಾರ್ಯವನ್ನು ಮಾಡಿರುವುದೇ ಆಗಲಿ ಅಥವಾ ಬೆಂಗಳೂರು ಡೈರಿ ಸ್ಥಾಪನೆಯ ವಿಷಯದಲ್ಲಿಯೇ ಆಗಲಿ, ಶ್ರೀಮಾನ್ ಕೃಷ್ಣಪ್ಪನವರನ್ನು ಯಾವಾಗಲೂ ಜ್ಞಾಪಿಸಿಕೊಳ್ಳಬೇಕಾಗುತ್ತದೆ. ತಮಗೆಲ್ಲ ಗೊತ್ತಿದ್ದ ಹಾಗೆ ಅವರ ಕಾಲದಲ್ಲಿ ಹರಿಯಾಣ, ಪಂಜಾಬ್‌ನಲ್ಲಿ ಸಾವಿರಾರು ದನಗಳು ಕಾಡಿನಲ್ಲಿ ಮೇಯ್ದುಕೊಂಡು ತಿರುಗಾಡಿಕೊಂಡಿದ್ದವು. ಈಗಲೂ ಇರಬಹುದು. ಪ್ರಥಮವಾಗಿ ಶ್ರೀಮಾನ್ ಕೃಷ್ಣಪ್ಪನವರು ಕೇಂದ್ರದ ಮಂತ್ರಿಗಳಾಗಿರಬೇಕಾದರೆ ಆ ರೀತಿ ಕಾಡಿನಲ್ಲಿ ಓಡಾಡುತ್ತಿದ್ದ ದನಗಳನ್ನೆಲ್ಲಾ ಹಿಡಿಸಿ ತಂದು ಅವಕ್ಕೆ ಮೂಗುದಾರ ಹಾಕಿಸಿ ಹತೋಟಿಗೆ ತಂದು ನಮ್ಮ ರಾಜ್ಯಕ್ಕೂ ಮತ್ತೆ ಬೇರೆ ರಾಜ್ಯಗಳಲ್ಲಿರತಕ್ಕ ರೈತರಿಗೆ ಬಹಳ ಸುಲಭದರದಲ್ಲಿ ಹಂಚಿದರು ಅವರು ಅನಿಮಲ್ ಹಸ್ಬೆಂಡರಿ ಡೆವೆಲಪ್‌ಮೆಂಟ್ ಬಗ್ಗೆ ತುಂಬಾ ಉತ್ಸಾಹದಿಂದ ಎಂದಿ ...ಯದೇ ಇರುವಂತಹ ಸ್ಮರಣೀಯವಾದ ಸಾಧನೆಯನ್ನು ಮಾಡಿ ಹೋಗಿದ್ದಾರೆ.

ಕೊಟ್ಟು ಬಿಡುತ್ತಿದ್ದರು. ಬಹುಶಃ ಈ ಒಂದು ಧಾರಳತನದಿಂದ ಅವರ ಮೇಲೆ ಅಷ್ಟೊಂದು ಟೀಕೆಗಳು ಬರುವುದಕ್ಕೆ ಕಾರಣವಾಗಿತ್ತೋ ಏನೋ. ಅವರ ಜೊತೆಯಲ್ಲಿ ಸಹೋದ್ಯೋಗಿಯಾಗಿ ಕೆಲಸ ಮಾಡತಕ್ಕ ಅವಕಾಶ ಇದ್ದುದರಿಂದ ಈ ಮಾತನ್ನು ಹೇಳುತ್ತಿದ್ದೇನೆ. ಇಂದಹ ವ್ಯಕ್ತಿಗಳದು ಅಕಾಲ ಮರಣವೆಂದು ಹೇಳಿ ದುಃಖಿಸಬೇಕಾಗುತ್ತದೆ. ಅವರು ಇನ್ನೂ ಕೆಲವಾರು ವರ್ಷಗಳ ಕಾಲ ಇರಬಹುದಾಗಿತ್ತು. ಆದರೆ ಅವರ ವಯಸ್ಸು ಬೇಗ ಮುಗಿದುಹೋಯ್ತು. ಇದು ಒಂದು ಹೆಚ್ಚಿನ ದುಃಖಕ್ಕೆ ಕಾರಣವಾಗಿದೆ.

**ಶ್ರೀ ಎಸ್.ಆರ್. ಬೊಮ್ಮಾಯಿ:** ಮಾನ್ಯ ಎಂ.ವಿ. ಕೃಷ್ಣಪ್ಪನವರ ಬಗ್ಗೆ ಹೆಚ್ಚು ಪರಿಚಯ ನನಗಿಲ್ಲ. ರೈತ ಕುಟುಂಬದಿಂದ ಬಂದ ಅವರು ರೈತರಿಗಾಗಿ ಹೋರಾಟ ಮಾಡಿದ್ದನ್ನು ಕೇಳಿದ್ದೇನೆ, ನೋಡಿದ್ದೇನೆ. ಶ್ರೀ ಕಿದ್ವಾಯಿಯವರು ಕೇಂದ್ರದಲ್ಲಿ ಆಹಾರ ಮಂತ್ರಿಗಳಾಗಿದ್ದಾಗ ಇವರು ಉಪಮಂತ್ರಿಗಳಾಗಿದ್ದರು. ಆಗ ಆಹಾರ ಧಾನ್ಯಗಳ ಮೇಲಿದ್ದ ಕಂಟ್ರೋಲ್ ಪದ್ಧತಿಯನ್ನು ತೆಗೆದುಹಾಕಿದ ಶ್ರೇಯಸ್ಸಿನಲ್ಲಿ ಇವರ ಪಾಲಿದೆ. ರಾಷ್ಟ್ರದ ಆಹಾರ ಸಮಸ್ಯೆಯನ್ನು ಬಿಡಿಸುವ ದಿಸೆಯಲ್ಲಿ ನೀತಿ ನಿರೂಪಣೆಯನ್ನು ಮಾಡಿದ ಮಹಾನ್ ವ್ಯಕ್ತಿಗಳಲ್ಲಿ ಇವರು ಒಬ್ಬರು. ಇವರ ಸೇವೆ ಕರ್ನಾಟಕಕ್ಕೆ ಶ್ರೇಷ್ಠ ಮಟ್ಟದ್ದು. ಗ್ರಾಮಾಂತರ ಪ್ರದೇಶಗಳ ಜನರ ಏಳಿಗೆಗಾಗಿ ಉತ್ಸಾಹದಿಂದ ಚಿಂತನೆಯನ್ನು ಮಾಡಿರತಕ್ಕ ನಾಯಕರೊಬ್ಬರನ್ನು ಶ್ರೀ ಕೃಷ್ಣಪ್ಪನವರ ನಿಧನದಿಂದ ಕಳೆದುಕೊಂಡಿದ್ದೇವೆ.

* * * * *

# ಅನುಬಂಧಗಳು

## ಪತ್ನಿ ಪ್ರಮೀಳಾ ಅವರಿಗೆ ಬರೆದ ಪತ್ರ

**ಎಂ.ವಿ. ಕೃಷ್ಣಪ್ಪ ಅವರು ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವ ಸಮಯದಲ್ಲಿ ಮೈಸೂರಿನಲ್ಲಿದ್ದರು. ತಾವು ಭಾರತ ಮಾತೆಯನ್ನು ಬಿಡುಗಡೆ ಮಾಡಬೇಕೆಂಬ ಹುಮ್ಮಸ್ಸು, ಹುರುಪಿನಿಂದ ಹೋರಾಡುತ್ತಿದ್ದರೂ ತಮ್ಮ ಊರಾದ ತಾಯಿಲೂರಿನ ನೆನಪು ಸಹ ಕಾಡುತ್ತಿದ್ದುದ್ದು ಸಹಜವೆ. ತಮ್ಮ ಶ್ರೀಮತಿಯಾದ 'ಪ್ರಮೀಳಾ' ರವರಿಗೆ 1946 ಜನವರಿ 26 ರಂದು ಪತ್ರ ಬರೆದು ಕಿವಿ ಮಾತುಗಳನ್ನು ಹೇಳಿದರು. ಈ ಪತ್ರವನ್ನು ಶ್ರೀಮತಿ ಪ್ರಮೀಳಮ್ಮನವರು ಗೌರವದಿಂದ ತೋರಿಸಿದರು. ಅದರ ಒಡಲು ಈ ರೀತಿ ಇದೆ.**

ಚಿ|| ಪ್ರಮೀಳಗೆ ಆಶೀರ್ವಾದಗಳು

ಸೋಮಾರಿಯಾಗಬೇಡ, ಸೋಮಾರಿಗಳಿಗೆ ದೇವರು ಸಹಾಯ ಮಾಡುವುದಿಲ್ಲ. ಈಗ ಕಷ್ಟಪಟ್ಟರೆ ಮುಂದು ಫಲವುಂಟು. ನೀನು ಕಲಿಯಬೇಕಾದದ್ದು ಬಹಳ ಇದೆ. ನಿನ್ನ ವಿಷಯದಲ್ಲಿ ನನಗೆ ಬಹಳ ದುಃಖವೂ ಕರುಣೆಯೂ ಹುಟ್ಟುತ್ತದೆ.

ಒಳ್ಳೆಯ ಹೃದಯದಿಂದ ಇರು. ಮೋಸ, ಬೂಟಾಟಿಕೆ, ಹೊಟ್ಟೆಕಿಚ್ಚು ಇಂತಹ ಕೆಟ್ಟಗುಣಗಳನ್ನು ಹತ್ತಿರ ಸೇರಿಸದೆ ಸಂತೋಷವಾಗಿರು. ದೇವರು ಬಡತನ ಕೊಟ್ಟಿರಬಹುದು, ಆದರೆ ಕೊಳೆತನ ಕೊಡುವುದಿಲ್ಲ. ಧನವು ಶಾಶ್ವತವಲ್ಲ. ನಮ್ಮ ಕಣ್ಣ ಮುಂದೆ ಹಣಗಾರರು ಬಡವರಾಗುತ್ತಾರೆ, ಹಾಗೆಯೇ ಬಡವರು ಹಣಗಾರರಾಗುತ್ತಾರೆ, ಅದೆಲ್ಲಾ ಅಶಾಶ್ವತ. ಬಡವರನ್ನು ಕಂಡರೆ ಕರಣೆಯಿಂದ ಕಾಣುವುದನ್ನು ಅಭ್ಯಾಸ ಮಾಡು.

ಮಹಾತ್ಮಗಾಂಧಿಯವರ ಜೀವನ ಚರಿತ್ರೆಯನ್ನು ಪೂರ್ತಿಯಾಗಿ ಓದಿ ಮುಗಿಸಿರುತ್ತೀಯೆಂದು ನಂಬಿದ್ದೇನೆ. ಮುಗಿಸಿದ್ದರೆ ಮತ್ತೊಂದು ಸಲ ಓದು. ನಿನಗೆ ಸಾಧ್ಯವಾದರೆ ಅದನ್ನು ಬೇರೆ ಖಾಲಿ ಪುಸ್ತಕದಲ್ಲಿ ಬರಿ, ಬಹಳ ಒಳ್ಳೆಯದು.

* * * * *

## ಪತ್ನಿಗೆ ಮತ್ತೊಂದು ಪತ್ರ

### ಎಂ.ವಿ. ಕೃಷ್ಣಪ್ಪ ಅವರು ವಿದೇಶಿ ಪ್ರವಾಸದಲ್ಲಿದ್ದಾಗ ಕಸ್ತೂರಿ ಬಾ ಆಶ್ರಮದಲ್ಲಿದ್ದ ಪ್ರಮೀಳಾ ಅವರಿಗೆ ಬರೆದ ಮತ್ತೊಂದು ಪತ್ರ.

ಚಿ|| ಪ್ರಮೀಳಾಗೆ,

ಆಶೀರ್ವಾದಗಳು, ನಾನು ಮತ್ತು ನನ್ನ ಮಿತ್ರರೂ ದೇವರ ದಯೆಯಿಂದ ಕ್ಷೇಮವಾಗಿದ್ದೇವೆ. ನಾನಾ ಭಾಗಗಳಿಂದ ಬಂದಿರುವ ನಿಮ್ಮಂತೆಯೇ ಸೇವಾದೃಷ್ಟಿ ಇಟ್ಟುಕೊಂಡು ತಮ್ಮ ಜೀವನವನ್ನೆಲ್ಲಾ ಜನಸೇವೆಯಲ್ಲಿ ಕಳೆಯಲು ತರಪೇತಾಗಲು ಬಂದಿರುವ ಸಹೃದಯರಾದ ಅವರಲ್ಲಿ ಸ್ನೇಹಭಾವ, ಅಕ್ಕತಂಗಿಯರಂತೆ ಭಾತೃತ್ವವನ್ನು ಸಂಪಾದಿಸಲು ನೀವೆಲ್ಲಾ ತ್ಯಾಗಜೀವನವನ್ನು ಈಗಲೇ ಅಭ್ಯಾಸ ಮಾಡಬೇಕು.

ನಿಮ್ಮ ಜೀವನವನ್ನು ಮಹಾತ್ಮಗಾಂಧಿ ಕಸ್ತೂರಿ ಬಾ ರವರಂತೆ ದೇಶಸೇವೆ ಜನಸೇವೆಯಲ್ಲಿ ಕಳೆಯಬೇಕೆಂದು ಬೇಡಿಕೊಳ್ಳಿರಿ. ಉಪ್ಪು, ಮೆಣಸಿನಕಾಯಿ, ಹುಣಸೆಹಣ್ಣಿಗೆ ಜಗಳವಾಡುವ ನೀವು ಮುಂದೇನು ಮಾಡಬಲ್ಲಿರಿ. ನೀವು ಶಿಬಿರದಲ್ಲಿ ಸೇರಿರುವುದು ತಿಂದು, ತೇಗಿ ಒಂದು ದಿನ ಊರುಗಳಿಗೆ ಹೋಗಲಿಕ್ಕಲ್ಲಾ. ದೇಶಕ್ಕಾಗಿ, ಜನರಿಗಾಗಿ, ತ್ಯಾಗಮಯ ಜೀವನವನ್ನು ಅಭ್ಯಾಸ ಮಾಡಲು ಮಹಾತ್ಮರು ಆ ರೀತಿ ತಮ್ಮ ಜೀವನದಲ್ಲಿ ಸರ್ವಸುಖ ಭೋಗಗಳನ್ನು ಹುಲ್ಲಿಗಿಂತ ಕಡೆಯಾಗಿ ಕಂಡು ತ್ಯಾಗಜೀವನವನ್ನು ನಡೆಸದ್ದುದರಿಂದ ಅವರಿಗೆ ಈಗ ಅಷ್ಟು ಗೌರವವಿದೆ. ಅವರು ಕಷ್ಟಗಳನ್ನು ಅನುಭವಿಸಿ ತಪಸ್ಸಿನ ಮಹಿಮೆಯನ್ನು ಅರಿತವರಾಗಿದ್ದರಿಂದ ಅವರು ದೇವರಿಗಿಂತ ದೊಡ್ಡವರಾಗಿದ್ದಾರೆ. ಸುಖವನ್ನು ಅಪೇಕ್ಷಿಸುವವರಿಗೆ ಎಂದೂ ಸುಖ ಲಭಿಸುವುದಿಲ್ಲ. ದುಃಖವೇ ಅವರ ಪಾಲಿಗೆ ಕಾದಿರುತ್ತೆ. ಯಾಕೆಂದರೆ ಸುಖಕ್ಕೆ ಮೇರೆಯಿಲ್ಲಾ. ಎಷ್ಟು ಸುಖಪಟ್ಟರೂ ಇನ್ನಷ್ಟು ಸುಖಕ್ಕೆ ಮನುಷ್ಯ ಶರೀರವು ಆಶಿಸುತ್ತದೆ. ಅದಕ್ಕೆ ತೃಪ್ತಿಯಿಲ್ಲ.

ಸುಖಗಳಿಗೆ ಆಸೆಪಡುವ ನೀವು ಹಳ್ಳಿಗಳಿಗೆ ಹೇಗೆ ಹಿಂತಿರುಗಿ ಜನರ ಸೇವೆ ಮಾಡುತ್ತೀರೋ ಅನುಮಾನವಾಗಿದೆ.

'ಕಸ್ತೂರಿಬಾ' ಶಿಬಿರದ ಚರಿತ್ರೆ ನಿನಗೆ ಗೊತ್ತಿರಲಾರದು. ಕಸ್ತೂರಿಬಾರವರ ತ್ಯಾಗ ಜೀವನವು ಆದರ್ಶವಾದುದು ನಿಮ್ಮ ಶಿಬಿರದಲ್ಲಿರುವ ಕಸ್ತೂರ್‌ಬಾರವರ ಚರಿತ್ರೆಯ ಪುಸ್ತಕವನ್ನು ತೆಗೆದುಕೊಂಡು ಓದು. ನಾಲ್ಕು ತಿಂಗಳು ಶಿಬಿರದಲ್ಲಿದ್ದು ಆ ಮಹಾ ವ್ಯಕ್ತಿಯ ಜೀವನ ಚರಿತ್ರೆ ಗೊತ್ತಿಲ್ಲದೆ ವಾಪಸ್ ಬಂದರೆ ಅದಕ್ಕಿಂತಲೂ ನಾಚಿಕೆಗೇಡಿತನ ಕೆಲಸ ಮತ್ತೊಂದಿರಲಾರದು.

* * * * *

## ಮಂತ್ರಿ ಪದವಿಗೆ ನೆಹರು ಆಹ್ವಾನ

ಲೋಕಸಭೆಗೆ ಎರಡನೇ ಬಾರಿಗೆ ತುಮಕೂರು ಲೋಕಸಭೆಯಿಂದ ಎಂ.ವಿ. ಕೃಷ್ಣಪ್ಪ ಅವರು ಆಯ್ಕೆಯಾದರು. ಮೊದಲ ಸಲ ಕೋಲಾರ ಲೋಕಸಭೆಯಿಂದ ಆಯ್ಕೆಯಾದಾಗ ಕೇಂದ್ರ ಮಂತ್ರಿಮಂಡಲದಲ್ಲಿ ಕೃಷಿ ಹಾಗೂ ಆಹಾರ ಖಾತೆ ಉಪ ಸಚಿವರಾಗಿ ಉತ್ತಮ ಕೆಲಸಗಳನ್ನು ಮಾಡಿದರು. ಪ್ರಧಾನಿ ನೆಹರೂರವರು ಎಂ.ವಿ.ಕೆ. ಅವರಿಗೆ ಶುಭಾಶಯಗಳನ್ನು ನೀಡಿ ಮತ್ತೇ ಕೇಂದ್ರ ಮಂತ್ರಿ ಮಂಡಲದಲ್ಲಿ ಸ್ಥಾನವನ್ನು ನೀಡಿದರು. ಇದು ಎಂ.ವಿ.ಕೆ. ಅವರ ಕಾರ್ಯ ವೈಖರಿಯನ್ನು ಗುರ್ತಿಸುವಂತಹದು.

ಶ್ರೀ ಪಂಡಿತ ಜವಾಹರಲಾಲ ನೆಹರು ರವರು ಶ್ರೀ ಎಂ.ವಿ.ಕೆ ಅವರಿಗೆ ಪತ್ರದ ಮೂಲಕ ಮಂತ್ರಿ ಪದವಿಯನ್ನು ನೀಡಿದ್ದನ್ನು ನೋಡಬಹುದು.

No. 299-pmo/57
New Delhi
April 16, 1957

My Dear Krishnappa,

I Should like you to continue as Deputy Minister in the new council of Ministers. The swering in Ceremony of this now council will take place tomorrow, Wednesday 17th April, at 6 p.m. in Rastrapati Bhavan.

Your's Sincerely,

**Jawaharlal Nehru**

* * * * *

## ಮಗಳು ಸತ್ಯಾ ಮದುವೆಗೆ ಇಂದಿರಾ ಶುಭಾಶಯ

ಎಂ.ವಿ. ಕೃಷ್ಣಪ್ಪನವರು 1975ರಲ್ಲಿ ಹೊಸಕೋಟೆ ಲೋಕಸಭಾ ಕ್ಷೇತ್ರದಿಂದ ಲೋಕಸಭಾ ಸದಸ್ಯರಾಗಿ ಆಯ್ಕೆಯಾದರು. 1973ರಲ್ಲಿ ತಮ್ಮ ಮಗಳಾದ 'ಸತ್ಯಾ'ರವರನ್ನು ಡಾ|| ಮುನೇಗೌಡ ರವರಿಗೆ ಮದುವೆ ಮಾಡಿಕೊಟ್ಟರು. ಈ ಸಂದರ್ಭದಲ್ಲಿ ಪ್ರಧಾನಮಂತ್ರಿ ಶ್ರೀಮತಿ ಇಂದಿರಾಗಾಂಧಿರವರು ಮದುವೆಗೆ ಆಗಮಿಸಲು ಸಾಧ್ಯವಾಗದೆ ಶುಭಾಶಯಗಳನ್ನು ಕಳುಹಿಸಿದರು.

PRIME MINISTER'S HOUSE
NEW DELHI
JUNE , 1973

Dear Shri Krishnappa

Thank you for inviting me to your daughter's Wedding.

Please give my blessings and good wishes to the bride and the bridegroom

Yours Sincerely

**Indira Gandhi**

* * * * *

## ರಾಷ್ಟ್ರಪತಿ ಸಂಜೀವರೆಡ್ಡಿ ಅವರ ಸಂತಾಪ ಪತ್ರ

**ಎಂ.ವಿ. ಕೃಷ್ಣಪ್ಪ ಅವರು ಅನಾರೋಗ್ಯದ ಕಾರಣ ಬೆಂಗಳೂರಿನ ಖಾಸಗಿ ನರ್ಸಿಂಗ್ ಹೋಂನಲ್ಲಿ ಸೇರಿದವರು ಪ್ರಜ್ಞಾಶೂನ್ಯರಾದರು. 1980 ರ ಆಗಸ್ಟ್ ಒಂದನೇ ತಾರೀಖು ಪವಿತ್ರವಾದ ಮಣ್ಣಲ್ಲಿ ಸೇರಿ ಹೋದರು. ಎಂ.ವಿ.ಕೆ ರವರು ದೈವಾಧೀನರಾದಾಗ ರಾಷ್ಟ್ರಭವನದಿಂದ ಸಂಸತ್‌ನಿಂದ ಶೋಕಸಾಗರವೇ ಹರಿದು ಬಂತು.**

**ಅಂದಿನ ರಾಷ್ಟ್ರಪತಿ ನೀಲಂ ಸಂಜೀವರೆಡ್ಡಿ ಎಂ.ವಿ.ಕೆ. ರವರ ಆತ್ಮಕ್ಕೆ ಶಾಂತಿ ಕೋರಿ ಕುಟುಂಬಕ್ಕೆ ಧೈರ್ಯ ಹೇಳಿದರು.**

RASHTRAPATI BHAVAN NEW DELHI INDIA

11th August, 1980

Dear Srimati Krishnappa

I am soory to know of the demise of your husband, Shri M.V. Krishnappa. I convey to you and other members of your family my condolences

Yours sincerely

**M. SANJIVA REDEY**

* * * * *

## ಪ್ರಧಾನಿ ಇಂದಿರಾ ಅವರ ಶೋಕ ಸಂದೇಶ

ಪ್ರಧಾನಮಂತ್ರಿ ಶ್ರೀಮತಿ ಇಂದಿರಾಗಾಂಧಿಯವರು ಎಂ.ವಿ. ಕೃಷ್ಣಪ್ಪನವರ ಅಕಾಲಿಕ ಮರಣದಿಂದ ದುಃಖತಪ್ತರಾಗಿ ಶ್ರೀಮತಿ ಎಂ.ವಿ.ಕೆ. ರವರ ಮನೆಗೆ ಧೈರ್ಯ ನೀಡಿದ ಪತ್ರ.

PRIME MINISTER'S HOUSE
NEW DELHI
August 2, 1980

Dear Smt Krishnappa

I am deeply grieved to hear of your husband's sudden and untimely death.

Shri Krishnappa served the country with devotion and dynamism. He made a mark on Karnataka and the centre. His forth rightness and indentification with the rural people won him a large circle of friends.

My sympathy and condolences to you and your children in you loss.

Yours Sincerely

**Indira Gandhi**

Smt. M.V. Krishnappa
46, Lavelle Road,
Bangalore

* * * * *

## ಗೆಳೆಯ ಶಾರದಾಪ್ರಸಾದರ ಸಂತಾಪ

**ಎಂ.ವಿ.ಕೆ. ಅವರ ನಿಧನದಿಂದ ಆಘಾತಗೊಂಡವರಲ್ಲಿ ಶ್ರೀಯುತರಾದ ಎಚ್.ವೈ. ಶಾರದಾಪ್ರಸಾದ್‌ರವರು ಸಹ. ಇವರು ಪ್ರಧಾನಮಂತ್ರಿಗಳ ಆಪ್ತ ಸಲಹೆಗಾರರಾಗಿದ್ದರು. ಎಂ.ವಿ.ಕೆ. ಹಾಗೂ ಶಾರದಾಪ್ರಸಾದರು ಬಾಲ್ಯದ ಗೆಳೆಯರೂ ಆಪ್ತರೂ ಆಗಿದ್ದರು. ಶ್ರೀಮತಿ ಎಂ.ವಿ. ಕೃಷ್ಣಪ್ಪನವರಿಗೆ ತಾವು ಬರೆದ ಪತ್ರದ ಒಡಲಿನ ಸಂಕ್ಷಿಪ್ತ ರೂಪ.**

INFORMATION ADVISER
TO THE PRIME MINISTER
NEW DELHI
AUGUST 18, 1980

ಮಾನ್ಯ ಸೋದರಿಯವರಲ್ಲಿ,

ವಿಧಿಯ ಹೊಡೆತದಿಂದ ನೀವು ಚೇತರಿಸಿಕೊಳ್ಳುತ್ತಿರಬೇಕು. ವಿಷಯ ತಿಳಿದಾಗ ನನಗೆ ಬಹಳ ವೇದನೆಯಾಯಿತು. ಹತ್ತಿರ ಹತ್ತಿರ ನಲವತ್ತು ವರ್ಷಗಳಿಂದ ಕೃಷ್ಣಪ್ಪನೂ ನಾನು ಗೆಳೆಯರಾಗಿದ್ದೆವು ಸಹವರ್ತಿಗಳಾಗಿದ್ದೆವು, ಅಣ್ಣ–ತಮ್ಮಂದಿರಂತೆ ನಡೆದುಕೊಂಡು ಬಂದಿದ್ದೆವು.

ಹಳೆಯ ನೆನಪುಗಳು ತುಂಬಿಹೋಗಿವೆ. ಬೆಂಗಳೂರು ಕಾಲೇಜಿನಲ್ಲಿ ಇದ್ದಾಗ ಸಮಾಜ ಸೇವಾ ಶಿಬಿರದಲ್ಲಿ ಒಟ್ಟಾಗಿದ್ದದ್ದು, ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಧುಮುಕಿದ್ದು, ಜೈಲಿನವಾಸ, ಒಟ್ಟಿಗೆ ಕಂಡ ಕನಸುಗಳು, ಒಟ್ಟಿಗೆ ಪಟ್ಟ ಪಾಡುಗಳು ಕಣ್ಣ ಮುಂದೆ ಸುಳಿದವು.

ನೂರು ಜನರನ್ನು ಆಕರ್ಷಿಸುವ ವ್ಯಕ್ತಿತ್ವ ; ಹತ್ತಿರ ಬಂದರವನ್ನು ಹಿಡಿದಿಟ್ಟುಕೊಳ್ಳುವಂತಹ ಹೃದಯ ಶಕ್ತಿ ; ಎಂದೂ ಬಾಡದ ಗೆಲುವು ಮುಖ. ಮತ್ತೆಲ್ಲಿ ತರೋಣ ಈ ಜನವನ್ನು ?

ಮಕ್ಕಳೆಲ್ಲರಿಗೂ ಧೈರ್ಯ ಹೇಳಬೇಕು. ನಿನ್ನ ಮನಸ್ಸನ್ನು ಗಟ್ಟಿ ಮಾಡಿಕೊಳ್ಳಬೇಕು. ದೂರದಿಂದ ಬೇರೆ ಏನು ಹೇಳಬಲ್ಲೆ?

ನಿಮ್ಮ ಭ್ರಾತೃ,

**ಎಚ್.ವೈ. ಶಾರದಾಪ್ರಸಾದ್**

* * * * *

## ಹೈಬ್ರಿಡ್ ಹಸುಗಳ ಹರಿಕಾರ

ದೇಶದ ಸ್ವಾತಂತ್ರ್ಯ ಸುವರ್ಣ ಮಹೋತ್ಸವದ ಅಂಗವಾಗಿ ಈ ದೇಶಕ್ಕಾಗಿ ದುಡಿದ ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯಾಗಿ ನೀಡಿರುವ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಸಮಾಜದಲ್ಲಿ ಯಾರು ತಮ್ಮ ಜೀವಿತ ಕಾಲದಲ್ಲಿ ತಮ್ಮ ಬದುಕಿನ ಅಮೂಲ್ಯ ದಿನಗಳನ್ನು ನಿಸ್ವಾರ್ಥತೆಯಿಂದ ಸಾರ್ವಜನಿಕ ಸೇವೆಗೆ ಮೀಸಲಾಗಿಟ್ಟು ಆ ಮುಖಾಂತರ ರಾಜ್ಯ ಮತ್ತು ರಾಷ್ಟ್ರ ಮಟ್ಟದ ಎತ್ತರದ ವ್ಯಕ್ತಿತ್ವವನ್ನು ಬೆಳೆಕೊಂಡಿರುತ್ತಾರೋ ಅಂಥಹವರ ಬದುಕಿನ ಅವಿಸ್ಮರಣೀಯ ಘಟನೆಗಳನ್ನು ಜೀವನ ಮೌಲ್ಯಗಳನ್ನು ಸಾಧನೆ ಸಿದ್ದಿಗಳನ್ನು ಕುರಿತು ಗ್ರಂಥಗಳನ್ನು ರಚಿಸುವುದು ಅರ್ಥಪೂರ್ಣವಾದುದು.

ಶ್ರೀ ಎಂ.ವಿ. ಕೃಷ್ಣಪ್ಪನವರು ತಮ್ಮ ವಿದ್ಯಾಭ್ಯಾಸ ಕಾಲದಲ್ಲಿಯೇ 1942ರ ಬ್ರಿಟಿಷರೇ ಭಾರತ ಬಿಟ್ಟು ತೊಲಗಿ ಎಂಬ ಚಳುವಳಿ ಮತ್ತು 1947ರಲ್ಲಿ ಮೈಸೂರು ಅರಮನೆ ಚಲೋ ಚಳುವಳಿಗಳಲ್ಲಿ ಅಪಾರ ಪಾತ್ರವು ಸ್ಮರಣೀಯವಾದುದು. 1947ರ ಚಳುವಳಿಯಲ್ಲಿ ನಾನೂ ಸಹ ಭಾಗವಹಿಸಲು ಅದೃಷ್ಟ ಒದಗಿ ಬಂತಲ್ಲಾ ಎಂಬುದೇ ನನಗೆ ಹೆಮ್ಮೆ.

ಶ್ರೀ ಎಂ.ವಿ.ಕೆ. ಅವರು ದೂರದೃಷ್ಟಿಯ ಪ್ರಯುಕ್ತ ಇಂದು ಅವರು ಸ್ಥಾಪನೆ ಮಾಡಿರುವ (ಚಿನ್ನದ ಗಣಿಯಲ್ಲಿ) ವಿದ್ಯಾಸಂಸ್ಥೆಗಳೇ ವಿದ್ಯಾ ದೇಗುಲಗಳಾಗಿವೆ. ಅದರಲ್ಲೂ ಶೇ 75% ರಷ್ಟು ಭಾಗ ಗಿರಿಜನರಿಗೆ ಅನುಕೂಲವಾಗಿರುವ ಸಂಸ್ಥೆಗಳು ಅಖಿಲ ಭಾರತ ಮಟ್ಟದಲ್ಲೇ ಪ್ರಖ್ಯಾತವಾಗಿವೆ. ಇಂದು ವರ್ಷಕ್ಕೆ ಸಾವಿರಾರು ವಿದ್ಯಾರ್ಥಿಗಳಿಗೆ ಅನುಕೂಲವಾಗಿದೆ.

ಹೈನುಗಾರಿಕೆ ಬಗ್ಗೆ ಹಳ್ಳಿಗಾಡಿನ ಪ್ರದೇಶದ ರೈತರ ಬಗ್ಗೆ ಅವರಿಗಿದ್ದ ಕಾಳಜಿಯಂತೂ ಹೇಳಲಸದಳವಾದದ್ದು. ಇಂದೂ ಕರ್ನಾಟಕ ರಾಜ್ಯದಲ್ಲಿ ಸುಮಾರು ವರ್ಷಕ್ಕೆ 500 ಕೋಟಿ ರೂ. ಗಳು ರಾಜ್ಯದ ರೈತರು ಬಡ ಮತ್ತು ಅತೀ ಬಡವರ ಜನತೆಗೆ ಹಣದ ರೂಪದಲ್ಲಿ ಅವರ ಕೈಗೆ ಸೇರುತ್ತಿರುವುದೇ ಸಾಕ್ಷಿಯಾಗಿದೆ.

ಪರದೇಶಗಳಿಂದ ಹೈಬ್ರಿಡ್ ಹಸುಗಳನ್ನು ಮತ್ತು ಮೂಲಭೂತ ಸೌಕರ್ಯಗಳನ್ನು ಒದಗಿಸಿದ್ದಾರೆ. ಇದಲ್ಲದೆ, ರೈತರಿಗೆ ಅನುಕೂಲವಾಗುವಂತಹ ಹೈಬ್ರಿಡ್ ಬೀಜಗಳು ರೇಷ್ಮೆ ವ್ಯವಸಾಯದಲ್ಲಿ ಉತ್ತಮ ತಳಿಗಳು, ರಾಜ್ಯದಲ್ಲಿ ತೊಡಗಿಸಿದ್ದು ಎಂ.ವಿ.ಕೆ. ಅವರು. ಇದನ್ನು ರಾಜ್ಯದ ರೈತರಿಗೆ ಕೇಂದ್ರ ಸರ್ಕಾರದಿಂದ ಮಂಜೂರು ಮಾಡಿಸಿರುತ್ತಾರೆ.

ಲೋಕಸಭೆ ಮತ್ತು ವಿಧಾನಸಭೆಯಲ್ಲಿ ಪ್ರತಿಭಾವಂತ ಸಂಸದೀಯ ಪಟುವಾಗಿ ಉತ್ತಮ ಭಾಷಣಗಳು, ರೈತರಿಗೆ ಅನುಕೂಲವಾಗುವಂತಹ ಕಾಯ್ದೆಗಳನ್ನು ತಂದಿರುತ್ತಾರೆ. ಅವರ ಭಾಷಣಗಳು ಈ ಪುಸ್ತಕದಲ್ಲೇ ಪ್ರಕಟವಾಗಿರುವ ಪ್ರಯುಕ್ತ ಪುನಃ ಅದರ ಬಗ್ಗೆ ಉಲ್ಲೇಖಿಸುವುದು ಸೂಕ್ತವಲ್ಲ.

ಇಂತಹ ಪ್ರತಿಭಾವಂತ ಮಹನೀಯರ ಬಗ್ಗೆ ವಿಧಾನಮಂಡಲದ ಗ್ರಂಥಾಲಯದವರು ಸ್ಮರಣೀಯ ಗ್ರಂಥಗಳನ್ನು ಪ್ರಕಟಿಸುತ್ತಿರುವುದು ನಿಜವಾಗಲೂ ಸಂತೋಷ.

**ಎಂ. ವಿ. ವೆಂಕಟಪ್ಪ**
ಮಾಜಿ ಸಭಾಪತಿಗಳು ವಿಧಾನ ಪರಿಷತ್
ಹಾಗೂ ಮಾಜಿ ವಿಧಾನಸಭಾ ಅಧ್ಯಕ್ಷರು,

* * * * *

## ನಾನು ಕಂಡಂತೆ, ನಮ್ಮ ತಂದೆ

ನಾ ಕಂಡಂತೆ ನಮ್ಮ ತಂದೆ ದಿವಂಗತ ಎಂ.ವಿ.ಕೆ. ಅವರು ಪ್ರಾಮಾಣಿಕ ದೇಶಭಕ್ತ, ಉತ್ಸಾಹಿ ಸ್ವಾತಂತ್ರ್ಯ ಹೋರಾಟಗಾರ, ಅಪ್ಪಟ ಕೃಷಿಕಾರ ಸರಳ ರಾಜಕಾರಣಿ, ಧೀಮಂತ ಹೋರಾಟಗಾರ, ಜನ ಸಮೂಹವನ್ನು ಮಂತ್ರಮುಗ್ಧರನ್ನಾಗಿ ಮಾಡುವ ಮಾಂತ್ರಿಕ ಮಾತುಗಾರ. ನಮ್ಮಮ್ಮನ ಪ್ರೀತಿಯ ಶ್ರೀಕೃಷ್ಣ, ನನ್ನ ಸೋದರ ಸೋದರಿಯರ ಪ್ರೀತಿಪಾತ್ರ ಅಪ್ಪ.

ಶ್ರೀಯುತರ ಮಗನಾಗಿ ನನ್ನ ತಂದೆಯ ಹಿರಿಮೆ ಗರಿಮೆಗಳನ್ನು ಹೇಳಿಕೊಳ್ಳಲು ಅವರ ಮಗನಾಗಿ ಸ್ವಲ್ಪ ಮುಜುಗರ ಅಗುತ್ತದೆ. ಆದರೂ ನಮ್ಮ ತಂದೆ ಎನ್ನುವುದನ್ನು ಪಕ್ಕಕ್ಕೆ ತಳ್ಳಿ ನಮ್ಮ ರಾಷ್ಟ್ರ ಮತ್ತು ಕರ್ನಾಟಕ ರಾಜ್ಯದ ರಾಜಕಾರಣದಲ್ಲಿ ಮಿಂಚಿ ಮರೆಯಾದ ಕೋಲಾರ ಜಿಲ್ಲೆಯ ರಾಜಕಾರಣಿಯನ್ನು ಮತ್ತು ಅವರ ಮೇರು ವ್ಯಕ್ತಿತ್ವವನ್ನು ನೆನೆಯುವುದು ನನಗೆ ತುಂಬಾ ಇಷ್ಟವಾದ ಕೆಲಸ. ಸಾಮಾನ್ಯ ಜನ ದಿವಂಗತ ಎಂ.ವಿ.ಕೆ. ಅವರ ಮಗನಾಗಿ ಮಾತನಾಡುತ್ತಿದ್ದರೆ ನನಗುಂಟಾಗುವ ಆನಂದ ಅಷ್ಟಿಷ್ಟಲ್ಲ. ನನ್ನ ತಂದೆಯವರ ಆತ್ಮೀಯ ಸ್ನೇಹಿತರಾದ ಹೆಚ್.ವೈ. ಶಾರದಾಪ್ರಸಾದ್ ಅವರು ದಿವಂಗತ ಪತ್ರಕರ್ತರಾದ ನಾರಾಯಣಸ್ವಾಮಿಯವರು, ಹೆನ್ರಿ ದೇವದಾಸ್ ಅಂಕಲ್ ಇನ್ನು ಕೆಲವರು ತಮ್ಮ ನೆನಪಿನ ಬುತ್ತಿಗಳಲ್ಲಿರುವ ನಮ್ಮ ತಂದೆಯ ನೆನಪುಗಳನ್ನು ಹಂಚಿಕೊಂಡಾಗ ಹಾಗೂ ಕೆಲವು ತುಣುಕುಗಳನ್ನು ಮೆಲುಕು ಹಾಕಿದಾಗ ಸಿಗುವ ಅಮೂಲ್ಯ ಘಟನೆಗಳು ಅಭೂತಪೂರ್ವ. ಈ ಪೈಕಿ ನಮ್ಮ ತಂದೆಯವರು ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಮಹಾತ್ಮ ಗಾಂಧೀಯವರ ಸ್ವಾತಂತ್ರ್ಯ ಹೋರಾಟದ ಕರೆಗೆ ಓಗೊಟ್ಟು ಅಸಹಕಾರ ಚಳುವಳಿಯ ಅಂಗವಾಗಿ ಕಾಲೇಜಿನ ತರಗತಿಗಳನ್ನು ಬಹಿಷ್ಕರಿಸಲು ಎಂ.ವಿ.ಕೆ. ನಾಯಕತ್ವದಲ್ಲಿ ತೀರ್ಮಾನಿಸಿದರಂತೆ. ಸದರಿ ಕಾಲೇಜಿನ ಪ್ರಾಚಾರ್ಯರು ಆಂಗ್ಲರಾಗಿದ್ದರಂತೆ. ಮತ್ತು ಆ ಕಾಲೇಜಿನಲ್ಲಿ ಈಸ್ಟ್ ಇಂಡಿಯಾ ನೌಕರರ ಮಕ್ಕಳು ಸಹ ಓದುತ್ತಿದ್ದರಂತೆ. ಸದರಿ ಪ್ರಾಚಾರ್ಯರು ಭಾರತೀಯ ವಿದ್ಯಾರ್ಥಿಗಳಿಗೆ ಮಾತ್ರ ಹಾಜರಾತಿ ನೀಡದೇ ಉಳಿದವರಿಗೆ ಹಾಜರಾತಿ ನೀಡಿ ಪರೀಕ್ಷೆಗೆ ಅವಕಾಶ ಕಲ್ಪಿಸಿದರಂತೆ. ಇದರಿಂದ ಕುಪಿತಗೊಂಡ ಎಂ.ವಿ.ಕೆ. ಅವರು ಪ್ರಾಚಾರ್ಯರ ಕೊಠಡಿಯ ಬೀಗ ಮತ್ತು ಬಾಗಿಲು ಒಡೆದು ಹಾಜರಾತಿ ಪುಸ್ತಕ ಸುಟ್ಟುಹಾಕಿದರಂತೆ ಮತ್ತು ಕೊಠಡಿಯನ್ನು ಸ್ಫೋಟಿಸಿದರಂತೆ.

ಈ ರೀತಿ ಮುಂದುವರೆದ ಆಂಗ್ಲರ ವಿರುದ್ಧದ ಚಟುವಟಿಕೆಗಳು ಮಿತಿಮೀರಿದಾಗ ಎಂ.ವಿ.ಕೆ. ಅವರನ್ನು ಹಿಡಿದುಕೊಟ್ಟವರಿಗೆ ಸೂಕ್ತ ಬಹುಮಾನವನ್ನು ಪ್ರಕಟಿಸಿದರಂತೆ. ಈ ಸಂದರ್ಭದಲ್ಲಿ ಮೈಸೂರಿನ ತಮ್ಮ ಆಪ್ತರ ಮನೆಯಲ್ಲಿ ಭೂಗತರಾಗಿದ್ದ ವಿಷಯ ತಿಳಿದ ಬ್ರಿಟೀಷ್ ಸೈನಿಕರು ಮನೆಗೆ ಮುತ್ತಿಗೆ ಹಾಕಿದರಂತೆ. ವಿಷಯ ತಿಳಿದ ಎಂ.ವಿ.ಕೆ. ಪ್ಯಾಂಟ್ ಷರ್ಟ ಕಳಚಿ ನಿಕ್ಕರ್ ಬನಿಯನ್‌ಗಳಲ್ಲಿ ಮೂಲೆಯಲ್ಲಿದ್ದ ಇದ್ದಿಲು ಮೂಟೆಯನ್ನು ತಮ್ಮ ತಲೆ ಮೇಲೆ ಇಟ್ಟುಕೊಂಡು

ಮುಖಕ್ಕೆ ಮಸಿ ಬಳಿದುಕೊಂಡು ಧೈರ್ಯದಿಂದ ಬ್ರಿಟೀಷ್ ಸೈನಿಕರ ಮುಂದೆಯೇ ಹಾದುಹೋದರಂತೆ. ಹೀಗೆ ವೇಷ ಮರೆಸಿ ತಪ್ಪಿಸಿಕೊಂಡು ಬ್ರಿಟೀಷ್ ಸೈನಿಕರಿಗೆ ಚೆಳ್ಳೆ ಹಣ್ಣು ತಿನ್ನಿಸಿದರಂತೆ.

ನನ್ನ ಬಾಲ್ಯದಲ್ಲಿ ದೆಹಲಿಯ ಪ್ರಾಥಮಿಕ ಶಾಲೆಯ ನನ್ನ ಸಹಪಾಠಿಯೊಬ್ಬರನ್ನು ನಿನ್ನ ಜಾತಿ ಯಾವುದೆಂದು ಉಪಾಧ್ಯಾಯರು ಕೇಳಿದಾಗ ಅವನು ಗೊತ್ತಿಲ್ಲಾ ಎಂದು ಹೇಳಿದ. ನನಗೂ ಈ ಬಗ್ಗೆ ಕುತೂಹಲವಾಯಿತು ಮನೆಯಲ್ಲಿ ತಂದೆಯವರನ್ನು ನಾವು ಯಾವ ಜಾತಿಯವರೆಂದು ಕೇಳಿದೆ. ತಕ್ಷಣ ಕೆಂಡಮಂಡಲರಾದ ತಂದೆಯವರು ಯಾರು ನಿನ್ನನ್ನು ಈ ಬಗ್ಗೆ ಕೇಳಿದರು ಎಂದು ಪ್ರಶ್ನಿಸಿದರು. ಮಾರನೆಯ ದಿನ ನನ್ನೊಂದಿಗೆ ಶಾಲೆಗೆ ಬಂದು ಮುಖ್ಯೋಪಾಧ್ಯಾಯರ ಕಛೇರಿಯಲ್ಲಿ ಕುಳಿತು ಈ ಬಗ್ಗೆ ವಿಚಾರಿಸಿ ಎಳೆಮಕ್ಕಳ ಹೃದಯದಲ್ಲಿ ಜಾತೀಯತೆ ವಿಷ ಬೀಜ ಬಿತ್ತಬಾರದು ಎಂದು ಸದರಿ ಉಪಾಧ್ಯಾಯರಿಗೆ ನಮ್ಮ ತಂದೆ ಛೀಮಾರಿ ಹಾಕಿದರು.

ಒಮ್ಮೆ ಡಾ|| ಕುರಿಯನ್ ಅವರು ನನ್ನ ತಮ್ಮ ಕೋಲಾರ ಜಿಲ್ಲೆಯ ಹಾಲು ಉತ್ಪಾದಕರ ಸಂಘದ ಮಾಜಿ ಅಧ್ಯಕ್ಷ ಜಯಸಿಂಹನೊಂದಿಗೆ ನಮ್ಮ ತಂದೆಯ ಬಗ್ಗೆ ಮೆಲುಕು ಹಾಕುತ್ತಾ ಅವರ ಒಂದು ನುಡಿಯನ್ನು ಹೀಗೆ ನೆನಪಿಸಿಕೊಂಡು ಹೇಳಿರುತ್ತಾರೆ "The only Tree that can save this country is poultry". ಸಾಮಾನ್ಯರು ಎದುರಾಗಿ ನಮ್ಮ ತಂದೆಯನ್ನು ಏನು ಡೆಲ್ಲಿ ದೊರೆಗಳೇ ಎಂದು ತೆಲುಗಿನಲ್ಲಿ ಹೇಳಿದಾಗ ತಕ್ಷಣ ಅವರು ತೆಲುಗಿನಲ್ಲಿ "ಡೆಲ್ಲಿಕಿ ದೊರೈನಾ ತಲ್ಲಿಕಿ ಬಿಡ್ಡೇ" (ದೆಹಲಿಗೆ ದೊರೆಯಾದರೂ ತಾಯಿಗೆ ಮಗುವೇ) ಎಂದು ಉತ್ತರಿಸುತ್ತಿದ್ದರು. ಇದು ಅವರು ಸಾಮಾನ್ಯರೊಂದಿಗೆ ಬೆರೆಯುತ್ತಿದ್ದ ಬದುಕಿನ ಕ್ರಮವನ್ನು, ಸರಳ ಜೀವನ ವಿಧಾನದ ಬಗ್ಗೆ ಅವರಿಗಿದ್ದ ಒಲವನ್ನೂ ತೋರಿಸುತ್ತದೆ. ನಮ್ಮ ತಂದೆಗೆ ಕೃಷಿ ಬಗ್ಗೆ ಅಪಾರ ದೂರದೃಷ್ಟಿ ಇದ್ದಿದ್ದರ ಫಲವೇ ದೇಶದಲ್ಲಿನ ಹೈನೋದ್ಯಮ, ರೇಷ್ಮೆ ಕೃಷಿ, ಹೈಬ್ರಿಡ್ ತಳಿಗಳ ಆವಿಷ್ಕಾರವಾಯಿತು.

ನಾನು ಮತ್ತು ನನ್ನ ಸಹೋದರ ಜಯಸಿಂಹ ಕೃಷ್ಣಪ್ಪ ಬಾಲ್ಯದಲ್ಲಿ ದೆಹಲಿಯಲ್ಲಿ ಓದಿ ಈಗ ಹಳ್ಳಿಯಲ್ಲಿ ಜೀವನ ನಡೆಸುತ್ತಿದ್ದೇವೆ. ಕಾರಣ ನಮ್ಮ ತಂದೆಯ ಬಯಕೆ. ಹಾಗಾಗಿ ಜನ ಸಾಮಾನ್ಯರ ನಡುವೆ ಅವರ ಕಷ್ಟನಷ್ಟಗಳಲ್ಲಿ ಭಾಗವಹಿಸುವ ರೀತಿಯಲ್ಲಿ ನಮಗೆ ತುಂಬ ಆನಂದ ಸಿಕ್ಕುತ್ತದೆ. ನಮ್ಮ ತಂದೆ ನಮಗೆ ಮಾಡಿಟ್ಟಿರುವ ದೊಡ್ಡ ಆಸ್ತಿ ಎಂದರೆ ಜನರ ಪ್ರೀತಿ, ವಿಶ್ವಾಸ. ಈಗಲೂ ದೆಹಲಿಯಿಂದ ಹಳ್ಳಿಯವರೆಗೂ ನಮ್ಮಪ್ಪನ ಸ್ನೇಹಿತರು, ಹಿತೈಷಿಗಳು, ಬೆಂಬಲಿಗರು, ಅಭಿಮಾನಿಗಳು ದೊಡ್ಡ ಸಂಖ್ಯೆ ಇದೆ. ಇವರುಗಳು ನುಡಿ, ನಡೆ, ವಿಶ್ವಾಸ, ಪ್ರೀತಿ, ಅಭಿಮಾನ ಶ್ರೀರಕ್ಷೆ ನಮಗೆ ದಾರಿದೀಪವಾಗಿದೆ

**ಅಶೋಕ್ ಕೃಷ್ಣಪ್ಪ**
ಮಾಜಿ ಅಧ್ಯಕ್ಷರು ಜಿಲ್ಲಾ ಪಂಚಾಯತ್
ಕೋಲಾರ ಜಿಲ್ಲೆ

## ಅಂದು ಷಂ.ವಿ.ಕೆ. ಆ ಕಾರ್ಯ ಮಾಡದಿದ್ದರೆ.... ?

ಅಂದು ಎಂ.ವಿ. ಕೃಷ್ಣಪ್ಪನವರು ಆ ಕೆಲಸವನ್ನು ಮಾಡದೇ ಇದ್ದಿದ್ದರೆ ಇಂದು ಕೋಲಾರ ಜಿಲ್ಲೆಯ ಪರಿಸ್ಥಿತಿ ಏನಾಗುತ್ತಿತ್ತು? ಕೋಲಾರ ಜಿಲ್ಲೆಗೆ ಕೋಲಾರ ಜಿಲ್ಲೆಯೇ ಬದುಕಿಲ್ಲದೇ ಬರಡಾಗುತ್ತಿತ್ತು. ಈ ಮಾತು ಜಿಲ್ಲೆಗೆ·ರಾಜ್ಯಕ್ಕೆ ಹಾಗೂ ರಾಷ್ಟ್ರಕ್ಕೆ ಅನ್ವಯವಾಗುವಂತಹದು.

ಹೌದು, ಆವತ್ತು ಎಂ.ವಿ.ಕೆ. ಅವರು ಭಾರತಕ್ಕೆ ಅದರಲ್ಲೂ ಕೋಲಾರ ಜಿಲ್ಲೆಗೆ ಮಿಶ್ರತಳಿ ಹಸುಗಳನ್ನು ಪರಿಚಯಿಸದೇ ಇದ್ದಿದ್ದರೆ ಇವತ್ತು ಕೋಲಾರ ಜಿಲ್ಲೆಗೆ ಉಳಿಗಾಲವೇ ಇರುತ್ತಿರಲಿಲ್ಲ. ಜೊತೆಗೆ ಜಪಾನ್ ದೇಶದಿಂದ ಹೈಬ್ರಿಡ್ ಭತ್ತವನ್ನು ನಮ್ಮ ದೇಶಕ್ಕೆ ಪರಿಚಯಿಸಿದ ಕೀರ್ತಿ ಎಂ.ವಿ.ಕೆ. ಅವರದು. ಇದರಿಂದ ದೇಶದಲ್ಲಿ 'ಹಸಿರು ಕ್ರಾಂತಿ' ಉಂಟಾಗಲು ಕಾರಣವಾಯ್ತು.

ಯಾವುದೇ ಶಾಶ್ವತ ನದಿ ನಾಲೆಗಳಿಲ್ಲದೆ ಕೇವಲ ಮಳೆ ನೀರನ್ನೇ ಆಶ್ರಯಿಸಿ ಬದುಕು ರೂಪಿಸಿಕೊಳ್ಳುತ್ತಿರುವ ಕೋಲಾರ ಜಿಲ್ಲೆಗೆ ಇಂದು ಹೈನೋದ್ಯಮವೇ ಕಾಮಧೇನು. ಅಂದು ಎಂ.ವಿ.ಕೆ. ಅವರು ವಿದೇಶದಿಂದ ತಂದು ಕೋಲಾರ ಜಿಲ್ಲೆಯ ರೈತರ ಮನೆಯ ಬಾಗಿಲಿನಲ್ಲಿ ಬಿಟ್ಟ ಮಿಶ್ರ ತಳಿಯ ರಾಸುಗಳೇ ಇಂದು ಕೋಲಾರ ಜಿಲ್ಲೆಯ ಜೀವನಾಧಾರವಾಗಿವೆ ಎಂಬುದು ಅತಿಶಯೋಕ್ತಿಯ ಮಾತಲ್ಲ.

ಕೋಲಾರ ಜಿಲ್ಲೆಗೆ ರೇಷ್ಮೆ, ಹಾಲು ಮತ್ತು ಚಿನ್ನದ ನಾಡು ಎಂಬ ಹೆಸರು ಬಂದಿರುವ ಪೈಕಿ ರೇಷ್ಮೆ ಮತ್ತು ಹಾಲಿನ ಸಂಪೂರ್ಣ ಕೀರ್ತಿ ಎಂ.ವಿ. ಕೃಷ್ಣಪ್ಪನವರಿಗೆ ಸಲ್ಲಬೇಕು. ಇಂದು ಕೆ.ಜಿ.ಎಫ್. ಚಿನ್ನದ ಗಣಿಗಳು ಬರಿದಾಗಿವೆ. ಜಾಗತೀಕರಣದ ನಿಟ್ಟಿನಲ್ಲಿ ಚೈನಾ ರೇಷ್ಮೆಯ ಹಾವಳಿಗೆ ದೇಶೀಯ ರೇಷ್ಮೆ ಉದ್ಯಮ ತತ್ತರಿಸುತ್ತಿದೆ. ಇಂಥ ಪರಿಸ್ಥಿತಿಯಲ್ಲಿ ಕೋಲಾರ ಜಿಲ್ಲೆಗೆ ಉಳಿದಿರುವುದು ಹೈನೋದ್ಯಮ ಒಂದೇ. ಅದೇ ಇವತ್ತಿಗೂ ರೈತರ ಬದುಕು ರೂಪಿಸುತ್ತಿದೆ.

ಇಂದು ಕೋಲಾರ ಜಿಲ್ಲೆಯಲ್ಲಿ ಕ್ಷೀರ ಕ್ರಾಂತಿ ಅತ್ಯಂತ ಯಶಸ್ವಿಯಾಗಿ ನಡೆಯುತ್ತಿದೆ. ಜಿಲ್ಲೆಯಲ್ಲಿ ಪ್ರತಿದಿನ ಸರಾಸರಿ ಆರು ಲಕ್ಷ ಲೀಟರ್ ಹಾಲು ಉತ್ಪಾದನೆಯಾಗುತ್ತಿದೆ. ಗ್ರಾಮೀಣ ಪ್ರದೇಶದಲ್ಲಿ ಸರಿಸುಮಾರು 1,500 ಹಾಲು ಉತ್ಪಾದಕರ ಸಹಕಾರ ಸಂಘಗಳು ಕಾರ್ಯನಿರ್ವಹಿಸುತ್ತಿದ್ದು, ಸುಮಾರು 5 ಲಕ್ಷ ಕುಟುಂಬಗಳು ಹೈನೋದ್ಯಮದ ತಮ್ಮ ಬದುಕಿನ ಬಂಡಿಯನ್ನು ಸಾಗಿಸುತ್ತಿವೆ. ಇಡೀ ರಾಜ್ಯದಲ್ಲಿ ಕೋಲಾರ ಜಿಲ್ಲೆಯು ಹಾಲು ಉತ್ಪಾದನೆಯಲ್ಲಿ ಎರಡನೇ ಸ್ಥಾನದಲ್ಲಿದ್ದರೆ ಪ್ರಾಥಮಿಕ ಹಾಲು ಉತ್ಪಾದಕರ ಸಹಕಾರ ಸಂಘಗಳ ಸ್ಥಾಪನೆಯಲ್ಲಿ ಮೊದಲ ಸ್ಥಾನದಲ್ಲಿದೆ. ಇದರಿಂದ ದಿನದಿಂದ ದಿನಕ್ಕೆ ಹೆಚ್ಚಾಗುತ್ತಿರುವ ಹಾಲಿನ ಉತ್ಪಾದನೆಯನ್ನು ಸುಧಾರಿಸಿಕೊಳ್ಳಲಾಗದ ನಿಟ್ಟಿನಲ್ಲಿ ರೈತರು ಹೈನೋದ್ಯಮವನ್ನು ಆಶ್ರಯಿಸುತ್ತಿದ್ದಾರೆ.

ಬರಗಾಲದ ಬವಣೆಯಲ್ಲಿ ಬಳಲಿ ಬೆಂಡಾಗಿ ಕಡಿಮೆ ನೀರಿನ ಲಭ್ಯತೆಯನ್ನು ಬೆಳೆದ ತರಕಾರಿ ಬೆಳೆಗಳಿಗೆ ಸೂಕ್ತ ಬೆಳೆ ಸಿಗದೆ ಕಂಗಾಲಾಗುತ್ತಿರುವ ರೈತರ ಜೀವನದ ಏಕೈಕ ಆಶಾಕಿರಣವಾಗಿ ಹಾಲು ಉತ್ಪಾದನೆಯು ಹೊರಹೊಮ್ಮಿದೆ. ಖಚಿತವಾಗಿ ಆರ್ಥಿಕ ನೆರವು ನೀಡುವ ಸಾಧನವಾಗಿ ಹೈನೋದ್ಯಮವು ರೈತರಿಗೆ ಕಾಣಿಸಿಕೊಂಡಿದೆ. ಇದಕ್ಕೆಲ್ಲಾ ಎಂ.ವಿ.ಕೆ. ತಂದುಕೊಟ್ಟ ವಿದೇಶಿ ತಳಿಯ ರಾಸುಗಳೇ ಮೂಲ ಕಾರಣ. ಈ ಕಾರಣದಿಂದ ನಮ್ಮ ದೇಶ ಎಂ.ವಿ.ಕೆ. ಅವರನ್ನು ಹೈನುಗಾರಿಕೆ 'ಪಿತಾಮಹ' ಎಂದು ಕರೆಯುತ್ತಿದೆ.

ಇಂದು ಕೋಲಾರ ಜಿಲ್ಲೆಯ ಜನತೆಗೆ ಭೂಮಿಯಿಲ್ಲ, ಮಳೆಯಿಲ್ಲ, ಬೆಳೆಯಿಲ್ಲವೆಂದರೂ ಹೈನೋದ್ಯಮವು ಕೆಲಸ ನೀಡಿ ಕೈಗೊಂದಿಷ್ಟು ಕಾಸು ತಂದು ಕೊಡುವ ಆದಾಯ ಮೂಲವಾಗಿದೆ. ಇದು ದೇಶದ ಪ್ರತಿಯೊಬ್ಬ ರೈತನ ಆರ್ಥಿಕ ಪರಿಹಾರದ ಮೂಲ. ಒಂದೆರಡು ಹಸುಗಳನ್ನು ಸಾಕಿಕೊಂಡು ಹಾಲು ಮಾರಾಟದಿಂದಲೇ ಬದುಕು ರೂಪಿಸಿಕೊಂಡು ಶ್ರೀಮಂತವಾಗಿರುವ ಕುಟುಂಬಗಳು ದೇಶಾದ್ಯಂತ ನಾವು ಕಾಣಬಹುದು.

ಕೋಲಾರ ಜಿಲ್ಲೆಗೆ ಬಿ.ಇ.ಎಂ.ಎಲ್. ಕಾರ್ಖಾನೆಯ ಕೊಡುಗೆಯನ್ನೂ ಎಂ.ವಿ.ಕೆ. ಅವರು ಒದಗಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ. ಚಿನ್ನದ ಉತ್ಪಾದನೆ ಕುಂಠಿತಗೊಂಡ ಕಾರಣ ಕೇಂದ್ರ ಸರ್ಕಾರಿ ಸ್ವಾಮ್ಯದ ಭಾರತ ಗೋಲ್ಡ್ ಮೈನ್ಸ್ ಸಂಸ್ಥೆಯು ಮುಚ್ಚಲ್ಪಟ್ಟಿದ್ದು ಕೋಲಾರದ ಚಿನ್ನದ ಗಣಿ ಪ್ರದೇಶಕ್ಕೆ ಭೂಷಣವಾಗಿ ಭಾರತ್ ಅರ್ತ್ ಮೂವರ್ಸ್ ಸಂಸ್ಥೆಯು ನಿಂತಿದೆ. ಅಷ್ಟೇ ಅಲ್ಲ ಸುಮಾರು 5,000ಕ್ಕೂ ಹೆಚ್ಚು ಮಂದಿ ಉದ್ಯೋಗ ಅವಕಾಶ ಕಲ್ಪಿಸಿದೆ.

ಹೈನೋದ್ಯಮ ಮತ್ತು ಬಿ.ಇ.ಎಂ.ಎಲ್. ಸ್ಥಾಪನೆಯ ವಿಚಾರದಲ್ಲಿ ಅಂದು ಎಂ.ವಿ. ಕೃಷ್ಣಪ್ಪ ಅವರು ಆಸಕ್ತಿ ತೋರದೇ ಇದಿದ್ದರೆ ......? ಸತತವಾಗಿ ಬರಗಾಲದ ಬವಣೆಗೆ ಸಿಕ್ಕಿ ನರಳುತ್ತಿರುವ ಕೋಲಾರ ಜಿಲ್ಲೆ ಪರಿಸ್ಥಿತಿ ಇನ್ನಷ್ಟು ಬರ್ಬರವಾಗುತ್ತಿತ್ತು. ಹೈನೋದ್ಯಮವು ಕೋಲಾರ ಜಿಲ್ಲೆಯ ರೈತರ ಬದುಕು ರೂಪಿಸುತ್ತಿದೆ ಮತ್ತು ಬಿ.ಇ.ಎಂ.ಎಲ್. ಕಾರ್ಖಾನೆಯು ನಿರುದ್ಯೋಗಿಗಳ ಆಶಾಕಿರಣವಾಗಿದೆ. ಈ ಎರಡೂ ಉದ್ಯಮಗಳು ಜಿಲ್ಲೆಯ ಪಾಲಿನ ಕಾಮಧೇನು ಕಲ್ಪವೃಕ್ಷಗಳಾಗಿವೆ ಹಾಗಾಗಿಯೇ ಎಂ.ವಿ. ಕೃಷ್ಣಪ್ಪನವರು ಕೋಲಾರ ಜಿಲ್ಲೆಯ ಪಾಲಿಗೆ ಪ್ರಾತಃಸ್ಮರಣೀಯರಾಗಿದ್ದಾರೆ. ಇಡೀ ದೇಶಕ್ಕೆ ಮಾದರಿ ರಾಜಕಾರಣಿಯಾಗಿ ನಿಂತಿದ್ದಾರೆ.

**ಬಿ.ವಿ. ಗೋಪಿನಾಥ್**
ವರದಿಗಾರರು, ಸಂಯುಕ್ತ ಕರ್ನಾಟಕ,
ಕೋಲಾರ

* * * * *

## ಅವರನ್ನು ಪ್ರತಿ ರೈತ ಕುಟುಂಬವೂ ಸ್ಮರಿಸುತ್ತದೆ

ಕೋಲಾರ ಜಿಲ್ಲೆಯ ಧೀಮಂತ ರಾಜಕಾರಣಿ ಎಂ.ವಿ. ಕೃಷ್ಣಪ್ಪ ಅವರನ್ನು ನನಗೆ ಪರಿಚಯಿಸಿದವರು ಹಿರಿಯ ಪತ್ರಕರ್ತರಾದ ಎಂ.ವಿ.ಕೆ. ಅವರ ಆಪ್ತ ಬಳಗದಲ್ಲಿ ಒಬ್ಬರಾದ ಜಿ ನಾರಾಯಣಸ್ವಾಮಿಯವರು. ಅವರಿಗೆ ನಾನು ನಿಮ್ಮ ಊರಿನವನೇ, ನಾನು ಶಾಲಾ ವಿದ್ಯಾರ್ಥಿಯಾಗಿದ್ದಾಗ ನಿಮ್ಮನ್ನು ಸಚಿವರಾಗಿದ್ದಾಗ ಕಂಡಿದ್ದೆ ಎಂದಾಗ ಎಂ.ವಿ.ಕೆ. ಅವರ ಸಂತೋಷಪಟ್ಟರು. ಆನಂತರ ಭೇಟಿಯಾದಾಗಲೆಲ್ಲಾ ಜಿಲ್ಲೆಯ ಅಭಿವೃದ್ಧಿ, ಪರಿಸ್ಥಿತಿಗಳ ಬಗ್ಗೆ ಚರ್ಚಿಸುತ್ತಿದ್ದರು. ಜಿಲ್ಲೆಗೆ ಕೀರ್ತಿ ತಂದ ರಾಜಕಾರಣಿಗಳಲ್ಲಿ ಎಂ.ವಿ.ಕೆ. ಪ್ರಮುಖರು. ರಾಷ್ಟ್ರದ ಭೂಪಟದಲ್ಲಿ ಕೋಲಾರ ಜಿಲ್ಲೆಯ ಹೆಸರು ಹೈನೋದ್ಯಮದಲ್ಲಿ ರಾರಾಜಿಸುತ್ತಿರಬೇಕಾದರೆ ಅದಕ್ಕೆ ಮುಖ್ಯ ಕಾರಣಕರ್ತರು ಎಂ.ವಿ.ಕೆ. ಅವರೇ. ಮಂಡ್ಯ ಜಿಲ್ಲೆಯ ಜನ ಸರ್. ಎಂ.ವಿ.ವಿ. ಅವರನ್ನು ಪೂಜಿಸುತ್ತಿರುವಂತೆ ಕೋಲಾರ ಜಿಲ್ಲೆಯ ಪ್ರತಿ ರೈತ ಕುಟಂಬವೂ ಎಂ.ವಿ.ಕೆ. ಅವರನ್ನು ಸ್ಮರಿಸುತ್ತಾರೆ. ಪ್ರತಿ ಹಾಲು ಉತ್ಪಾದಕರ ಸಂಘದಲ್ಲಿಯೂ ಅವರ ಭಾವಚಿತ್ರವಿದೆ. ಬೆಂಗಳೂರು ಜಿಲ್ಲಾ ಹಾಲು ಒಕ್ಕೂಟದಲ್ಲಿ ಅವರ ಪ್ರತಿಮೆ ಪ್ರತಿಷ್ಠಾಪಿಸಿರುವುದು ಇದೇ ಕಾರಣಕ್ಕೆ. ದೇಶಕ್ಕೆ ಮೊಟ್ಟಮೊದಲ ಬಾರಿಗೆ ವಿದೇಶಿ ತಳಿಯನ್ನು ತಂದು ಕ್ಷೀರ ಕ್ರಾಂತಿಗೆ ನಾಂದಿ ಹಾಡಿದರು.

ಕೇಂದ್ರ ಸಚಿವರಾಗಿ, ರಾಜ್ಯದ ಮಂತ್ರಿಗಳಾಗಿ ಅವರ ಸೇವೆ ಚಿರಸ್ಮರಣೀಯ. ಸ್ವಾತಂತ್ರ್ಯ ಹೋರಾಟ ಕಾಲದಿಂದಲೂ ಅವರದು ಸರಳ ಜೀವನ. ಚಿಕ್ಕಬಳ್ಳಾಪುರ ಕ್ಷೇತ್ರದಿಂದ ಲೋಕಸಭೆಗೆ ಸ್ಪರ್ಧಿಸಿದಾಗ ಅವರು ಚುನಾವಣೆಗಳ ಬಗ್ಗೆ ತಲೆಕೆಡಿಸಿಕೊಳ್ಳದೇ ಸಾಮಾನ್ಯ ಜನರ ಸಮಸ್ಯೆಗಳ ಬಗ್ಗೆ ಚರ್ಚಿಸುತ್ತಿದ್ದರು. ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಎಂ.ವಿ.ಕೆ. ಅವರು ಕೋಲಾರಕ್ಕೆ ಬಂದ ತಕ್ಷಣ ಹಿರಿಯ ಗಾಂಧೀವಾದಿ ಕೆ. ಪಟ್ಟಾಭಿರಾಮನ್ ಅವರನ್ನು ಕಂಡು ಆಶೀರ್ವಾದ ಪಡೆದು ಪ್ರಸಕ್ತ ರಾಜಕೀಯದ ಬಗ್ಗೆ ಚರ್ಚಿಸುತ್ತಿದ್ದರು.

ಪತ್ರಕರ್ತರ ಬಗ್ಗೆ ತುಂಬು ಗೌರವ ಹೊಂದಿದ್ದ ಅವರು ಸುದ್ದಿ ಗೋಷ್ಠಿಗಳಲ್ಲಿ ಎಲ್ಲ ಪ್ರಶ್ನೆಗಳಿಗೂ ಸಮಂಜಸವಾಗಿ ಉತ್ತರಿಸುತ್ತಿದ್ದರು. ಸಾರ್ವಜನಿಕ ಭಾಷಣಗಳಲ್ಲಂತೂ ಹಲವು ಹನ್ನೊಂದು ಕಥೆ, ಉಪಕಥೆಗಳನ್ನು ಕನ್ನಡ ತಲುಗಿನಲ್ಲಿ ಹಾಸ್ಯ ಮಿಶ್ರಿತವಾಗಿ ಹೇಳುತ್ತಾ, ಜನರನ್ನು ಸೆಳೆಯುತ್ತಿದ್ದರು. ಯಾವುದೇ ಸಣ್ಣ ಕೆಲಸಕ್ಕೆ ಹೋದರು ಅವರ ಬಳಿ ಬೇಸರವಿಲ್ಲದೆ ಕೆಲಸವನ್ನು ಮಾಡಿಕೊಡುತ್ತಿದ್ದರು. ಅವರ ಒಡನಾಟ ನನಗೆ ಜಿ.ಎನ್. ಸ್ವಾಮಿಯವರ ಮೂಲಕ ಲಭಿಸಿದ್ದು ಇಂದಿಗೂ ಕಣ್ಮುಂದೆ ಕಟ್ಟುತ್ತದೆ.

**ಕೆ. ಪ್ರಹ್ಲಾದರಾವ್**
ಹಿರಿಯ ಪತ್ರಕರ್ತ
ಕೋಲಾರ ಪತ್ರಿಕೆ

* * * * *

## ಎಂ.ವಿ.ಕೆ. : ಕೃಷಿಕರ ಒಡನಾಡಿ

ಸಾಂಪ್ರದಾಯಿಕ ಕೃಷಿ ಪದ್ದತಿಗಳಿಂದಲೇ ಭಾರತ ಸಮೃದ್ಧವಾಗಿದ್ದರೂ ಭಾರತ ಜನಸಂಖ್ಯೆ ಹೆಚ್ಚಳವಾಗುತ್ತಿರುವುದರಿಂದ ಆಧುನಿಕ ಬೇಸಾಯವನ್ನು ಕೈಗೊಳ್ಳಲೇಬೇಕಾದ ಅನಿವಾರ್ಯತೆ ಇದೆ ಎಂಬುದನ್ನು ಸ್ಪಷ್ಟವಾದ ಮಾತುಗಳಲ್ಲಿ ಹೇಳಿದ್ದವರು ಕೇಂದ್ರ ಸರ್ಕಾರದ ಕೃಷಿ ಖಾತೆಯ ಉಪ ಸಚಿವರಾಗಿದ್ದ ಎಂ.ವಿ. ಕೃಷ್ಣಪ್ಪನವರು.

ನನ್ನ ತಂದೆ ಜಿ. ನಾರಾಯಣ ಸ್ವಾಮಿಯಯವರಿಗೆ ಆತ್ಮೀಯರಾಗಿದ್ದ ಎಂ.ವಿ.ಕೆ. ನಮ್ಮ ಕುಟುಂಬಕ್ಕೆ ಹತ್ತಿರದವರು. ಚಿಕ್ಕಂದಿನಿಂದಲೇ ಅವರನ್ನು ಭೇಟಿ ಮಾಡುವ, ಮಾತನಾಡುವ ಅವಕಾಶ ಆಗಾಗ ಸಿಗುತ್ತಲೇ ಇತ್ತು.

### ಕೃಷಿ ಆಧಾರಿತ ವ್ಯವಸ್ಥೆ

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಕಾಲಿಟ್ಟು ಸಾರ್ವಜನಿಕ ಬದುಕಿಗೆ ಪ್ರವೇಶಿಸಿದ್ದ ಎಂ.ವಿ.ಕೆ. ಚತುರ ರಾಜಕಾರಣಿಯಂತೆ ಅಪ್ಪಟ ರೈತ. ಬಹುಮುಖ್ಯವಾಗಿ ಭಾರತದ ಏಳುಬೀಳುಗಳೆಲ್ಲವೂ ಕೃಷಿ ಆರ್ಥಿಕತೆಯ ಮೇಲೆ ನಿಂತಿದೆ ಎಂಬುದನ್ನು ಮನಗಂಡಿದ್ದ ಎಂ.ವಿ.ಕೆ. ಪಂಚವಾರ್ಷಿಕ ಯೋಜನೆಗಳಲ್ಲಿ ಕೃಷಿಗೆ ಹೆಚ್ಚು ಪ್ರಾಧಾನ್ಯತೆ ಸಿಗುವಂತೆ ಮಾಡಲು ಪ್ರಯತ್ನಿಸಿದರು. ಮುಂಗಾರು ಮಳೆಯೊಂದಿಗೆ ಸದಾ ಜೂಜಾಡಬೇಕಿದ್ದ ಭಾರತದ ರೈತರಿಗೆ ಉಪ ಕಸುಬುಗಳಾಗಿದ್ದ ಹೈನುಗಾರಿಕೆ, ರೇಷ್ಮೆ ಬೆಳೆಗಳಿಗೆ ಪ್ರೋತ್ಸಾಹ ನೀಡಲು ಸರ್ಕಾರವನ್ನು ಅಣಿಗೊಳಿಸಿದ ಎಂ.ವಿ.ಕೃಷ್ಣಪ್ಪನವರು ಜಾನುವಾರು ಸಂಪತ್ತು ಬೇಸಾಯಗಾರರಿಗೆ ಉತ್ತಮ ಆರ್ಥಿಕ ತಳಹದಿಯನ್ನು ಒದಗಿಸಿಕೊಡುವುದೆಂಬುದನ್ನು ದೇಶದುದ್ದಕ್ಕೂ ಪ್ರಾತ್ಯಕ್ಷಿಗಳನ್ನು ವ್ಯವಸ್ಥೆಗೊಳಿಸಿ ರೈತರ, ಕೃಷಿ ವಿಜ್ಞಾನಿಗಳ, ಹೈನುಗಾರರ ವಿಚಾರ ವಿನಿಮಯಕ್ಕೆ ಅವಕಾಶ ಕಲ್ಪಿಸಿಕೊಟ್ಟರು.

### ರೈತರ ಕೈ ಹಿಡಿಯುವ ಉದ್ಯಮ

ಮಳೆ ಕೈ ಕೊಟ್ಟರೂ ಹಸು, ಎಮ್ಮೆ ಸಾಕಾಣಿಕೆ, ಕೋಳಿ, ಕುರಿ, ಹಂದಿ, ರೇಷ್ಮೆ ಬೆಳೆಗಳು ರೈತರ ಕೈ ಹಿಡಿಯುತ್ತವೆ ಎಂಬುದನ್ನು 40 ವರ್ಷಗಳ ಹಿಂದೆ ಯೋಚಿಸಿದ್ದ ಎಂ.ವಿ.ಕೆ. ತೋಟಗಾರಿಕೆ, ಹೈನುಗಾರಿಕೆಗೆ ಸಂಬಂಧಿಸಿದ ಅತ್ಯಾಧುನಿಕ ಉಪಕರಣ ಸಂಶೋಧನೆಗಳಿಗೆ ಈ ನೆಲದಲ್ಲಿ ನೆಲೆ ಒದಗಿಸಿಕೊಟ್ಟವರು. ಎಂ.ವಿ.ಕೆ. ಬೆಂಗಳೂರಿಗೆ ಸಮೀಪದ ಹೆಸರುಘಟ್ಟ ಹಾಗೂ ಕೊಡಗಿನ ಕೂಡಿಗೆಗಳಲ್ಲಿರುವ ಹೈನುಗಾರಿಕೆ – ತೋಟಗಾರಿಕೆ ಕೇಂದ್ರಗಳು ಎಂ.ವಿ.ಕೆ. ಅವರ ದೂರದೃಷ್ಟಿಯ ಫಲ.

ಬರಗಾಲವೆಂಬ ಸಂಕಷ್ಟ ಚಕ್ರ ಆಗಾಗ ನಾಡನ್ನು ಸುತ್ತುವರೆಯುತ್ತಿದ್ದರೂ ಕರ್ನಾಟಕದ ಅನೇಕ ಜಿಲ್ಲೆಗಳ ರೈತರು ಹಸು ಸಾಕಿ ಹಾಲು ಮಾರಿ ಬದುಕು ಸಾಗಿಸಲು ಸಾಧ್ಯವಾಗಿರುವುದು ಹೈನುಗಾರಿಕೆಯಿಂದ. ಈ ಉದ್ಯಮವನ್ನು ಸಹಕಾರಿ ತತ್ವದ ಮೇಲೆ ಗಟ್ಟಿಯಾಗಿ ನಿಲ್ಲುವಂತೆ ಮಾಡಲು 'ಬೆಂಗಳೂರು ಡೈರಿ'ಗೆ ಚಾಲನೆ ಕೊಟ್ಟವರು ಎಂ.ವಿ.ಕೆ. ಅಂದು ಅವರು ಪ್ರಧಾನಿ ಲಾಲ್ ಬಹದ್ದೂರ್ ಶಾಸ್ತ್ರಿ ಅವರಿಂದ ಉದ್ಘಾಟಿಸಿದ ಬೆಂಗಳೂರು ಡೈರಿ ಇಂದು 'ನಂದಿನಿ'ಯಾಗಿ ದಶದಿಕ್ಕುಗಳಿಗೂ ಹಬ್ಬಿದೆ. ರೈತಾಪಿ ಜನರ ಮೊಗದಲ್ಲಿ ನಗು ಅರಳಿಸಿದೆ.

ಕುರಿ ಸಾಕಣೆ ಹಾಗೂ ಕಂಬಳಿ ಉದ್ಯಮಕ್ಕೆ ಚೈತನ್ಯಕೊಡಲು ಆಸ್ಟ್ರೇಲಿಯಾ ದೇಶದ ಕುರಿ ತಳಿಯನ್ನು ಇಲ್ಲಿಗೆ ತಂದ ಎಂ.ವಿ.ಕೆ. ಕುರಿ ಸಾಕಾಣೆಗೂ ಒಳ್ಳೆಯ ನೆಲೆ ಒದಗಿಸಿಕೊಟ್ಟಿದ್ದರು.

## ತೋಟಗಾರಿಕೆಗೂ ಒತ್ತು

ಹಿಮಾಲಯದಿಂದ ಉಗಮಿಸಿ ಸಮುದ್ರಕ್ಕೆ ವ್ಯರ್ಥವಾಗಿ ಹರಿದು ಹೋಗುತ್ತಿದ್ದ ಉತ್ತರ ಭಾರತದ ನದಿಗಳ ಬಗ್ಗೆ ಸಮೀಕ್ಷೆ ನಡೆಸಲು ಮೊದಲು ರೂಪಿಸಿದರೇ ಕೇಂದ್ರ ಆಹಾರ ಹಾಗೂ ಕೃಷಿ ಉಪ ಸಚಿವರಾಗಿದ್ದ ಎಂ.ವಿ.ಕೆ. 1952ರಿಂದ 1960ರವರೆಗೆ ಹಲವಾರು ರೈತಪರ ಯೋಜನೆಗಳಿಗೆ ಚಾಲನೆ ಕೊಟ್ಟ ಅವರು ಹೆಚ್ಚಿನ ಒತ್ತು ಕೊಟ್ಟಿದ್ದು ಹೈನುಗಾರಿಕೆ ಹಾಗೂ ತೋಟಗಾರಿಕಾ ಕ್ಷೇತ್ರಗಳಿಗೆ, ಅವರು ಹಾಕಿದ ಭದ್ರ ಬುನಾದಿಯೇ ಇಂದು ಇವೆರಡೂ ಕ್ಷೇತ್ರಗಳು ದೇಶಕ್ಕೆ ಅಪಾರ ವಿದೇಶಿ ವಿನಿಮಯವನ್ನು ಗಳಿಸಿಕೊಡುತ್ತಿದೆ ಎಂಬುದು ಉಲ್ಲೇಖಾರ್ಹ.

ಕೃಷಿ ಪರವಾಗಿ ಲೋಕಸಭೆಯಲ್ಲಿ ದನಿ ಎತ್ತಿದ ಎಂ.ವಿ.ಕೆ ಪಂಡಿತ – ಪಾಮರರನ್ನು ಮೋಡಿ ಮಾಡುವ ವಾಗ್ಮಿ. ನಾಲ್ಕಾರು ಭಾಷೆಗಳಲ್ಲಿ ನಿರರ್ಗಳವಾಗಿ ಮಾತನಾಡುತ್ತಿದ್ದ ಅವರಿಗೆ ಹಳ್ಳಿಗರೊಂದಿಗೆ ಸಂವಾದಿಸುವುದು ಬಹಳ ಇಷ್ಟದ ವಿಚಾರ. ಅವರದೇ ಮಾತುಗಳಲ್ಲಿ ಅವರದೇ ನುಡಿಗಟ್ಟುಗಳಲ್ಲಿ ಅಭಿವೃದ್ಧಿ ವಿಚಾರಗಳನ್ನು ಹೇಳುವುದೂ ಅವರಿಗೆ ಕರಗತ.

ಸ್ವಾತಂತ್ರ್ಯ ಚಳವಳಿಯಲ್ಲಿ ರೈಲು ಹೋರಾಟಕ್ಕೆ ಹೊಸ ಹುರುಪು ತಂದುಕೊಟ್ಟ ಯುವಕ ಎಂ.ವಿ. ಕೃಷ್ಣಪ್ಪ "ಯಾರದು ರೈಲು, ಯಾರದು ಜೈಲು – ನಮ್ಮದು ರೈಲು – ನಮ್ಮದು ಜೈಲು" ಎಂಬ ವಾಕ್ಯವನ್ನು ಹುಟ್ಟು ಹಾಕಿದರೆಂದು ಖ್ಯಾತ ಸಾಹಿತಿ ಹಾಗೂ ಸ್ವಾತಂತ್ರ್ಯ ಹೋರಾಟಗಾರ ದಿವಂಗತ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು ತಮ್ಮ ಹೋರಾಟದ ನೆನಪುಗಳು ಮಾಲಿಕೆಯಲ್ಲಿ ಸ್ಮರಿಸಿಕೊಂಡಿದ್ದಾರೆ. ಎಂ.ವಿ.ಕೆ. ಘೋಷವ್ಯಾಕ್ಯಗಳು ಮಾತ್ರವಲ್ಲ, ಹಲವಾರು ಆಧುನಿಕ ಗಾದೆಗಳನ್ನು ಹುಟ್ಟುಹಾಕಿದ್ದರು. ರಾಜಕೀಯ ಭಾಷಣಗಳ ಮಧ್ಯ ಕುಶಾಲು ಮಾತುಗಳ ಮೂಲಕ ಜನರನ್ನು ನಗಿಸುತ್ತಲೇ ತಮ್ಮ ವಿಚಾರಗಳನ್ನು ಅವರು ಮಂಡಿಸುತ್ತಿದ್ದರು.

## ಉತ್ತಮ ವಾಗ್ಮಿ

ಯಾವುದೇ ವಿಚಾರದ ಬಗ್ಗೆ ಮಾತನಾಡುವಾಗಲೂ ಆಳವಾದ ಅಧ್ಯಯನ ಮಾಡಿಕೊಂಡಿರುತ್ತಿದ್ದ ಎಂ.ವಿ.ಕೆ. ಉತ್ತಮ ಸಂಸದೀಯ ಪಟು ಎನಿಸಿಕೊಂಡಿದ್ದರು. ಕೃಷಿ ಹಾಗೂ ರೈತರ ಚರ್ಚೆಗಳಲ್ಲಿ ಎಂ.ವಿ.ಕೆ. ಅವರ ಅಭಿಪ್ರಾಯಗಳನ್ನು ಪಂಡಿತ್ ನೆಹರೂ ಅವರೇ ಮೆಚ್ಚಿದರೆಂಬುದು ಗಮನಾರ್ಹ. ಲಾಲ್ ಬಹದ್ದೂರು ಶಾಸ್ತ್ರಿ ಅವರ ಕಾಲದಲ್ಲಿ ಎಂ.ವಿ.ಕೆ. ಹೆಚ್ಚಿನ ಆಸಕ್ತಿವಹಿಸಿದ್ದು ಹೈನುಗಾರಿಕೆ ಕಡೆ. ಆಗಲೇ ಬೆಂಗಳೂರಿನಲ್ಲಿ ಡೈರಿ ಸ್ಥಾಪನೆ, ಅಖಿಲ ಭಾರತ ಜಾನುವಾರು ಪ್ರದರ್ಶನ ಜರುಗಿದ್ದು.

ರೈತರ ನೋವು ನಲಿವುಗಳೊಂದಿಗೆ ಯಾವಾಗಲೂ ಇರುತ್ತಿದ್ದ ಎಂ.ವಿ.ಕೆ. ಅವರಿಗೆ ಪತ್ರಕರ್ತರೊಡನೆ ಒಡನಾಟ ಇನ್ನೊಂದು ಇಷ್ಟವಾದ ಸಂಗತಿ. 'ಛೂಬಾಣ'ದ ಟಿ.ಎಸ್.ಆರ್. ಜೊತೆ ಆಗ್ಗಾಗ್ಗೆ ಬೈಠಕ್ ನಡೆಸುತ್ತಿದ್ದ ಎಂ.ವಿ.ಕೆ. ಅವರು ಹಿರಿಯ ಪತ್ರಕರ್ತ ಬಾಳೆಹಣ್ಣು ಪ್ರಿಯ ಎಸ್.ವಿ. ಜಯಶೀಲರಾವ್ ಅವರ ಮದುವೆಗೆ ನಂಜನಗೂಡು ರಸಬಾಳೆ ಗೊನೆಯನ್ನು ಉಡುಗೊರೆಯಾಗಿ ನೀಡಿದ್ದೂ ಉಂಟು!

ಕೃಷಿಕರ ಒಡನಾಡಿಯಾಗಿದ್ದು ಕರ್ನಾಟಕದಲ್ಲಿ ಹೈನುಗಾರಿಕೆಯ ಹರಿಕಾರರೆನ್ನಿಸಿಕೊಂಡ ಅಪ್ಪಟ ರೈತ ಎಂ.ವಿ. ಕೃಷ್ಣಪ್ಪ ಹಾಲಿನ ಹೊಳೆ ಹರಿಸುವಂತೆ ಮಾಡಿದ ಸ್ಮರಣೀಯ ವ್ಯಕ್ತಿ.

**– ಎನ್. ಜಗನ್ನಾಥ ಪ್ರಕಾಶ್**
**ಕನ್ನಡ ಲೇಖಕರು**

## ಎಂ.ವಿ.ಕೆ. ಬದುಕಿನ ಪ್ರಮುಖ ಘಟನೆಗಳು ಹಾಗೂ ಸಾಧನೆಗಳು

ಶ್ರೀಯುತ ಎಂ.ವಿ. ಕೃಷ್ಣಪ್ಪ ಅವರು ಸ್ವಾತಂತ್ರ್ಯ ಹೋರಾಟಗಾರರು. ಇವರ ಬದುಕು ರೈತರ ಪಾಲಿಗೆ ಕಾಮಧೇನು, ಕಲ್ಪವೃಕ್ಷ, ಇಂತಹ ಮಹಾನುಭಾವನ ಚರಿತ್ರೆ ಸ್ಮರಣೀಯವಾದದ್ದು. ಶ್ರೀ ಎಂ.ವಿ.ಕೆ. ಅವರು ಕರ್ನಾಟಕ ರಾಜ್ಯಕ್ಕೆ ಮಾಡಿದ ಸೇವೆಗಳು ನೂರಾರು. ಹಾಗೆಯೇ ಕೇಂದ್ರ ಸಚಿವರಾಗಿ ದೇಶದ ಎಲ್ಲಾ ರಾಜ್ಯಗಳಿಗೂ ಅನುಕೂಲಗಳನ್ನು ಮಾಡಿಕೊಟ್ಟಿದ್ದಾರೆ.

1. ಕ್ರಿ.ಶ. 01.06.1918 ರಂದು ಭರತ ಭೂಮಿಯಲ್ಲಿ ಜನಿಸಿದ ಪುಣ್ಯ ಪುರುಷ ಎಂ.ವಿ.ಕೆ.
2. ಪ್ರೌಢಶಾಲಾ ವಿದ್ಯಾರ್ಥಿಯಾಗಿದ್ದಾಗಲೇ ಇಂಗ್ಲೀಷರ ವಿರುದ್ಧ ಕೆ.ಜಿ.ಎಫ್. ನಲ್ಲಿ ಬಂಡಾಯ.
3. ಸ್ವಾತಂತ್ರ್ಯ ಹೋರಾಟದಲ್ಲಿ ಕೋಲಾರ ಜಿಲ್ಲೆಯಲ್ಲಿ ಮಹತ್ತರವಾದ ಪಾತ್ರ.
4. ಮೈಸೂರಿನಲ್ಲಿ ವಿದ್ಯಾಭ್ಯಾಸ – ವಿದ್ಯಾರ್ಥಿ ನಾಯಕನಾಗಿ ವಿದ್ಯಾರ್ಥಿ ಚಳುವಳಿಗಳು ಸ್ವಾತಂತ್ರ್ಯಕ್ಕಾಗಿ ಹಗಲಿರುಳು ಭೂಗತರಾಗಿದ್ದುಕೊಂಡು ಹೋರಾಟ ಹಾಗೂ ಜೈಲುವಾಸ.
5. ಬಿ.ಎ. ಪದವಿ – 1944.
6. 1942ರ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಪ್ರಮುಖ ಪಾತ್ರ.
7. ಕುಮಾರಿ ಪ್ರಮೀಳಾರವರೊಡನೆ ಗೃಹಸ್ಥಾಶ್ರಮ.
8. 1944ನೇ ಇಸ್ವಿಯಲ್ಲಿ ಶ್ರೀ ಎಂ.ವಿ.ಕೆ. ರವರು ಮೈಸೂರು ಪ್ರಜಾಪ್ರತಿನಿಧಿ ಸಭೆಗೆ ಮುಳಬಾಗಿಲು ಕ್ಷೇತ್ರದಿಂದ ಚುನಾಯಿತರಾದರು. 1944 ರಿಂದ 1947 ರವರೆಗೂ ಪ್ರಜಾ ಪ್ರತಿನಿಧಿಯಾಗಿ ಇದ್ದರು.
9. 1947ಕ್ಕೆ ಮೈಸೂರು ಪ್ರಜಾಪ್ರತಿನಿಧಿ ಸಭೆ ತೆರವಾದ ನಂತರ 1947ರಿಂದ 1952 ರವರೆಗೆ ಮೈಸೂರು ರಾಜ್ಯಾಂಗ ಸಭೆ ಸದಸ್ಯರಾದರು. ಶ್ರೀಯುತರ ನಡೆ–ನುಡಿಗಳಿಂದ ಪ್ರಭಾವಿತರಾದ ಸದಸ್ಯರು ಅವರನ್ನು ಮೈಸೂರು ರಾಜ್ಯಾಂಗ ಸಭೆಯ 'ಮುಖ್ಯ ಸಚೇತಕ'ರನ್ನಾಗಿ ಮಾಡಿದರು.
10. ಭಾರತದ ಪ್ರಪ್ರಥಮ ಮಹಾ ಚುನಾವಣೆಯನ್ನು ಘೋಷಿಸಲಾಯ್ತು. ಕೋಲಾರ ಜಿಲ್ಲೆಯ ಜನತೆಗೆ ಎಂ.ವಿ.ಕೆ. ಬೆಲ್ಲವಾಗಿದ್ದರು. ಕೋಲಾರ ಲೋಕಸಭೆಗೆ ಜನತೆ ಪ್ರೀತಿ ಹಾಗೂ ಅಭಿಮಾನದಿಂದ ಎಂ.ವಿ.ಕೆ. ಅವರನ್ನು ಅಭ್ಯರ್ಥಿಯನ್ನಾಗಿ ನಿಲ್ಲಿಸಿ 1952ರಲ್ಲಿ 'ಲೋಕಸಭಾ ಸದಸ್ಯ'ರನ್ನಾಗಿ ಆಯ್ಕೆ ಮಾಡಿ ಕಳಿಸಿದರು.

ಪ್ರಪ್ರಥಮವಾಗಿ ನಡೆದ ಮಹಾಚುನಾವಣೆಯಲ್ಲಿ ಕಾಂಗ್ರೇಸ್ ಜಯಭೇರಿ ಪಡೆಯಿತು. ಭಾರತದ ಪ್ರಪ್ರಥಮ ಪ್ರಧಾನ ಮಂತ್ರಿಯಾಗಿ ಶ್ರೀ ಪಂಡಿತ್ ಜವಾಹರಲಾಲ್ ನೆಹರು ಅಧಿಕಾರ ಸ್ವೀಕರಿಸಿದರು. ಇವರ ಮಂತ್ರಿಮಂಡಲದಲ್ಲಿ ಶ್ರೀ ಎಂ.ವಿ. ಕೃಷ್ಣಪ್ಪನರು "ಆಹಾರ ಮತ್ತು ಕೃಷಿ ಸಹಾಯಕ ಸಚಿವ"ರಾಗಿ ಅಧಿಕಾರ ಸ್ವೀಕರಿಸಿದರು.

11. 1952 ರಿಂದ 1957 ರವರೆಗೆ ಸಚಿವರಾಗಿ ದಕ್ಷತೆಯಿಂದ ಶ್ರೀ ಎಂ.ವಿ.ಕೆ. ರವರು ಕಾರ್ಯ ನಿರ್ವಹಿಸಿದರು. ಆನಂತರ 1957ರಲ್ಲಿ ನಡೆದ ಚುನಾವಣೆಯಲ್ಲಿ ಶ್ರೀ ಎಂ.ವಿ.ಕೆ. ರವರು 'ತುಮಕೂರು ಲೋಕಸಭೆ'ಯಿಂದ ಸ್ಪರ್ಧಿಸಿ ಗೆದ್ದರು.

    ಎರಡನೇ ಬಾರಿ ಶ್ರೀ ಎಂ.ವಿ.ಕೆ. ರವರು ಲೋಕಸಭಾ ಸದಸ್ಯರಾಗಿ ಹೋದನಂತರ ಮತ್ತೆ ಈ ಅವಧಿಯಲ್ಲಿಯೂ ಪ್ರಧಾನ ಮಂತ್ರಿಯಾಗಿ ಶ್ರೀ ಪಂಡಿತ ಜವಹರಲಾಲ ನೆಹರು ಅಧಿಕಾರ ಸ್ವೀಕರಿಸಿದರು. ಹಿಂದಿನ ಅವಧಿಯಲ್ಲಿ ಮಂತ್ರಿಯಾಗಿ ದಕ್ಷತೆಯಿಂದ ಕಾರ್ಯ ನಿರ್ವಹಿಸಿದರಿಂದ ತೃಪ್ತರಾದ ನೆಹರೂರವರು ಈ ಬಾರಿಯೂ ತಮ್ಮ ಮಂತ್ರಿ ಮಂಡಲದಲ್ಲಿ ಶ್ರೀ ಎಂ.ವಿ.ಕೆ ರವರಿಗೆ ಸಚಿವ ಸ್ಥಾನ ನೀಡಿದರು.

12. ಪ್ರಧಾನ ಮಂತ್ರಿ ನೆಹರೂ ರವರು ಕೇಂದ್ರ ಸಚಿವರಾದ A.P. ಜೈನ್ ರವರಿಗೆ ತುಮಕೂರು ಲೋಕಸಭೆಯಿಂದ ಆಯ್ಕೆ ಮಾಡಿಕೊಡಿ. ನಿಮ್ಮ ಸ್ಥಾನಕ್ಕೆ ರಾಜೀನಾಮೆ ನೀಡಿ ಸಹಕರಿಸಿ ಎಂದು ಎಂ.ವಿ.ಕೆ ಅವರಿಗೆ ಸಲಹೆ ನೀಡಿದರು 1962ರಲ್ಲಿ ತುಮಕೂರು ಲೋಕಸಭೆಗೆ ರಾಜೀನಾಮೆ ನೀಡಿ A.P. ಜೈನ್‌ರವರನ್ನು ಗೆಲ್ಲಿಸಿ ಕಳಿಸಿದರು.

13. ಪ್ರಧಾನ ಮಂತ್ರಿ ನೆಹರು ಅವರ ಆಜ್ಞೆಯಂತೆ ರಾಜ್ಯ ಕಾಂಗ್ರೆಸ್ ಸರ್ಕಾರ ಶ್ರೀ ಎಂ.ವಿ.ಕೆ. ರವರನ್ನು 'ವಿಧಾನ ಪರಿಷತ್ ಸದಸ್ಯ' ರನ್ನಾಗಿ ಆಯ್ಕೆ ಮಾಡಿದರು.

14. ಕರ್ನಾಟಕ ರಾಜ್ಯ (ಮೈಸೂರು ರಾಜ್ಯ) ವಿಧಾನ ಪರಿಷತ್ ಸದಸ್ಯರಾದ ಶ್ರೀ ಎಂ.ವಿ.ಕೆ. ರವರು 1962ರಲ್ಲಿ ರಾಜ್ಯ ಮಂತ್ರಿ ಮಂಡಲದಲ್ಲಿ ಕ್ಯಾಬಿನೆಟ್ ಸಚಿವರಾದರು. ರೆವಿನ್ಯೂ ಹಾಗೂ ಪಶುಸಂಗೋಪನಾ ಸಚಿವರಾಗಿ ದಕ್ಷತೆಯಿಂದ ಕಾರ್ಯ ನಿರ್ವಹಿಸಿದರು.

15. 1967ರವರೆಗೂ ಕರ್ನಾಟಕ ರಾಜ್ಯದಲ್ಲಿ ಸೇವೆ ಮಾಡಿದ ಶ್ರೀ ಎಂ.ವಿ.ಕೆ. ರವರು ದೇಶದ ಸೇವೆ ಮಾಡಲು ಮತ್ತೆ ಹೊಸಕೋಟೆ ಲೋಕಸಭಾ ಕ್ಷೇತ್ರದಿಂದ 1967ರಲ್ಲಿ ಸ್ಪರ್ಧಿಸಿ ಗೆದ್ದರು. 1970ರಲ್ಲಿ "All Inida Shipping Board" Chariman ರನ್ನಾಗಿ ಕೇಂದ್ರ ಸರ್ಕಾರ ಎಂ.ವಿ.ಕೆ. ರವರನ್ನು ನೇಮಿಸಿತು. ಆದರೆ ಎಂ.ವಿ.ಕೆ. ರವರು ಅಲ್ಲಿ ನಡೆಯುತ್ತಿರುವ ಭ್ರಷ್ಟಾಚಾರದಿಂದ ನೊಂದು ರಾಜೀನಾಮೆ ನೀಡಿದರು.

16. 1971ರಲ್ಲಿ ಮತ್ತೆ ಚುನಾವಣೆ ಘೋಷಿಸಿತು. ಈ ಅವಧಿಯಲ್ಲಿ ಶ್ರೀ ಎಂ.ವಿ.ಕೆ. ರವರು ಹಿಂದೆ ಗೆದ್ದಿದ್ದ ಹೊಸಕೋಟೆ ಕ್ಷೇತ್ರದಿಂದ ಆಯ್ಕೆ ಬಯಸಿದರು. ಜನತೆ ಹೊಸಕೋಟೆ ಲೋಕಸಭೆಯ ಕ್ಷೇತ್ರದಿಂದ ಶ್ರೀ ಎಂ.ವಿ.ಕೆ. ರವರನ್ನು ಆಯ್ಕೆ ಮಾಡಿ ಕಳಿಸಿದರು.

17. 1977 ರಲ್ಲಿ ಹೊಸಕೋಟೆ ಲೋಕಸಭಾ ಕ್ಷೇತ್ರದಿಂದ ಮತ್ತೆ ಆಯ್ಕೆಯಾಗಿ ಲೋಕಸಭಾ ಸದಸ್ಯರಾದರು.

    ಶ್ರೀ ಎಂ.ವಿ.ಕೆ. ರವರು ಮೊದಲನೇ, ಎರಡನೇ, ನಾಲ್ಕನೇ, ಐದನೇ ಹಾಗೂ ಆರನೇ ಅವಧಿಗಳಲ್ಲಿನ ಲೋಕಸಭಾ ಸದಸ್ಯರಾಗಿ ಸಚಿವರಾಗಿ ಈ ದೇಶದ ಸೇವೆಯನ್ನು ಮಾಡಿದ ಮಹಾನುಭಾವರು. ಒಟ್ಟು 5 ಬಾರಿ ಲೋಕಸಭಾ ಸದಸ್ಯರಾಗಿದ್ದವರು. ಒಂದು ಬಾರಿ ವಿಧಾನ ಪರಿಷತ್ ಸದಸ್ಯರಾಗಿ, ಸಚಿವರಾಗಿ ಸೇವೆ ಸಲ್ಲಿಸಿದವರು.

18. ಸಚಿವರಾಗಿ ಡೆನ್ಮಾರ್ಕ್, ಹಾಲೆಂಡ್, ಜಪಾನ್, ಚೈನಾ, ಕೆನಡಾ ಮುಂತಾದ ದೇಶಗಳಿಗೆ ಭೇಟಿ.

19. ವಿದೇಶಗಳಿಂದ ಹೈಬ್ರಿಡ್ ಬೀಜಗಳನ್ನು ತಂದು ಆಧುನಿಕ ಬೇಸಾಯ ಪದ್ಧತಿಯನ್ನು ಜಾರಿಗೆ ತಂದರು.

20. ಹೆಚ್.ಎಫ್. ಹಸುಗಳನ್ನು ಭಾರತಕ್ಕೆ ತಂದರು.

21. ಕೃಷಿ ಹಾಗೂ ರೇಷ್ಮೆಗೆ ಹೆಚ್ಚು ಪ್ರಾಧಾನ್ಯತೆ ನೀಡಿದರು.

22. ಈ ದೇಶದ ಕೋಟ್ಯಾಂತರ ರೈತರು ಸೀಮೆ ಹಸು (ಹೆಚ್.ಎಫ್.)ಗಳನ್ನು ಇಟ್ಟುಕೊಂಡು ಜೀವಿಸುತ್ತಿದ್ದಾರೆ. ಇದಕ್ಕೆ ಮೂಲಕಾರಣ ಭಾರತ ದೇಶಕ್ಕೆ ಹೆಚ್.ಎಫ್. (ಸೀಮೆಹಸು) ಹಸುಗಳನ್ನು ವಿಮಾನದಲ್ಲಿ ಡೆನ್ಮಾರ್ಕ್ ದೇಶದಿಂದ ತೆಗೆದುಕೊಂಡು ಬಂದು ನೀಡಿದ್ದು ಭಾರತದಲ್ಲಿ ಹಾಲಿನಿಂದ ಕೋಟ್ಯಾಂತರ ರೂಪಾಯಿಗಳ ವಹಿವಾಟು ನಡೆಯುತ್ತಿದೆ.

23. ದೇಶಾದ್ಯಂತ ಹಾಲಿನ ಡೈರಿಗಳನ್ನು ಸ್ಥಾಪನೆ.

24. ಬೇಸಾಯದಲ್ಲಿ ವಿದೇಶಿ ಪದ್ಧತಿಯನ್ನು ಜಾರಿಗೆ ತಂದರು.

25. ದೇಶಾದ್ಯಂತ ಆಧುನಿಕ ರೇಷ್ಮೆ ಬೆಳೆಯನ್ನು ಬೆಳೆಯಲು ಕಾರಣ ಕರ್ತರು ಎಂ.ವಿ.ಕೆ. ರವರು.

26. ಕೇಂದ್ರದಲ್ಲಿ ಆಹಾರ ಮತ್ತು ಕೃಷಿ ಸಚಿವರಾಗಿದ್ದಾಗ ಸಣ್ಣ ನೀರಾವರಿಗೆ ಎಂದು ಮುನ್ನೂರು ಕೋಟಿ ರೂಪಾಯಿ ಮೀಸಲಿಟ್ಟರು. ನೀರಾವರಿ ಬಾವಿ ತೋಡಲು ಸಾಲವಾಗಿ ಸರ್ಕಾರ 3 ಸಾವಿರ ನೀಡುತ್ತಿತ್ತು. ಮುಂದೆ ಎಂ.ವಿ.ಕೆ. ರವರು ರೈತರಿಗೆ ಸಹಾಯವಾಗಲೆಂದು 5 ಸಾವಿರ ಸಾಲವನ್ನು ನೀಡಲು ಆದೇಶಿಸಿದರು.

27. ದೇಶಾದ್ಯಂತ ಕಬ್ಬುಬೆಳೆಗೆ, ಸಕ್ಕರೆ ಕೈಗಾರಿಕೆಗಳಿಗೆ ಆದ್ಯತೆ ನೀಡಿದರು.

28. ಕೋಳಿ ಸಾಕಾಣಿಕೆ, ಮೀನು ಸಾಕಾಣಿಕೆ ಕೇಂದ್ರಗಳನ್ನು ದೇಶಾದ್ಯಂತ ಸ್ಥಾಪಿಸಲು ಕಾರಣಕರ್ತರು.

29. ಗೌರಿಬಿದನೂರಿನ ಸಕ್ಕರೆ ಕಾರ್ಖಾನೆ ಸ್ಥಾಪನೆ

30. ಆಹಾರ ಧಾನ್ಯಗಳ ಸಂರಕ್ಷಣಾ ಕೇಂದ್ರಗಳನ್ನು (ಗೋದಾಮುಗಳನ್ನು) ದೇಶಾದ್ಯಂತ ತೆರದರು.

31. ರಾಜ್ಯದಲ್ಲಿರ ಅಕ್ಕಿ ಗಿರಣಿಗಳನ್ನು ಸ್ಥಾಪಿಸಿದರು.

32. ದೆಹಲಿಯಿಂದ ಹೆಚ್.ಎಫ್. ಹಸುಗಳನ್ನು ರೈಲಿನಲ್ಲಿ ಬೆಂಗಳೂರು ಮೈಸೂರಿಗೆ ತಂದರು.

33. ರಾಜ್ಯದ ಭೂ ಕಂದಾಯ ಪದ್ಧತಿಯಲ್ಲಿ ಮಹತ್ತರ ಬದಲಾವಣೆ.

34. ಶೋಷಿತ ಜನಾಂಗಕ್ಕೆ ಭೂ ಹಂಚಿಕೆ.

35. ಕೆ.ಜಿ.ಎಫ್.ನಲ್ಲಿ ಬೆಮೆಲ್ ಕಾರ್ಖಾನೆ ಸ್ಥಾಪನೆ ಹಾಗೂ ಗೋಲ್ಡನ್ ವ್ಯಾಲಿ ವಿದ್ಯಾ ಸಂಸ್ಥೆ ಸ್ಥಾಪನೆ.

36. ರಾಜ್ಯ ಕಂದಾಯ ಸಚಿವರಾಗಿ ತಿರುಪತಿ ತಿರುಮಲದಲ್ಲಿ ಕರ್ನಾಟಕದ ಪ್ರವಾಸಿಗರಿಗಾಗಿ ಛತ್ರಗಳನ್ನು ಕಟ್ಟಿಸಿದರು.

37. ಯಾತ್ರಾ ಸ್ಥಳವಾದ ಮಲೆಮಹದೇಶ್ವರ ಬೆಟ್ಟವನ್ನು ಅಭಿವೃದ್ಧಿಪಡಿಸಿದರು.

38. 1ನೇ ಆಗಸ್ಟ್ 1980ರಲ್ಲಿ ಇಹಲೋಕ ತ್ಯಜಿಸಿದರು.

* * * * *



# ಎಂ.ವಿ.ಕೆ. ಚಿತ್ರ ಸಂಪುಟ



ಎಂ.ವಿ.ಕೆ. ದಂಪತಿಗಳು



ದಿ|| ಪ್ರಧಾನ ಮಂತ್ರಿ ಶ್ರೀ ಲಾಲ್ ಬಹದ್ದೂರ್ ಶಾಸ್ತ್ರಿ ಅವರೊಂದಿಗೆ ಎಂ.ವಿ. ಕೃಷ್ಣಪ್ಪ



ಶ್ರೀ ರಾಧಕೃಷ್ಣನ್ ಅವರೊಂದಿಗೆ ಎಂ.ವಿ. ಕೃಷ್ಣಪ್ಪ



ಇಂದಿರಾ ಗಾಂಧಿಯವರೊಂದಿಗೆ ಸಮಾಲೋಚನೆ



ಜವಾಹರಲಾಲ್ ಅವರೊಂದಿಗೆ ಎಂ.ವಿ.ಕೆ ತಮ್ಮ ಕುಟುಂಬದವರೊಂದಿಗೆ



ಇಂದಿರಾ ಗಾಂಧಿ ಅವರ ಜೊತೆ ಎಂ.ವಿ.ಕೆ. ಪರಿವಾರ



ಕೆರೆ ತುಂಬಿದ ಖುಷಿಗೆ ಕಾಸಿಗೊಂದು ಸೇರು ಅಕ್ಕಿ !